# ನಮ್ಮ ರಾಷ್ಟ್ರೀಯ ಚಳುವಳಿ

ಪ್ರಕಾಶಕರು
**ಭಾರತ ಜ್ಞಾನ ವಿಜ್ಞಾನ ಸಮಿತಿ**

**ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ**
ಭಾರತೀಯ ವಿಜ್ಞಾನ ಮಂದಿರದ ಆವರಣ
ಬೆಂಗಳೂರು - 12
ಫೋನ್: 3342384

"Namma Rashtriaya Chaluvali" A series of Desha Thiliyona Desha Badalisona, in the programme of our national movement. Edited by B.S.Soppin on behalf of Bharath Gyan Vigyan Samithi, IISc Campus, Bangalore - 560 012

1998-99

Pages : IV+80

© Bharat Gyan Vigyan Samithi, Karnataka State

Rs. 15/-

Copies : 3000

Published by

**Shri C.Yathiraju**
Secretary
**Bharath Gyan Vigyan Samithi**
Indian Institute of Science Campus
Bangalore - 560 012
Phone: 3342384

DTP
AKSHARA VINYASA
No. 12, 18th Cross, S.R.Nagar
Bangalore - 27




06205

# ಮುನ್ನುಡಿ

ಭಾರತವು ಸುಮಾರು ಎರಡು ನೂರು ವರ್ಷಗಳ ಕಾಲ ಬ್ರಿಟಿಶರ ಆಳ್ವಿಕೆಗೆ ಒಳಗಾಗಿತ್ತು. ಬ್ರಿಟಿಷರ ಆಡಳಿತ ದೌರ್ಜನ್ಯವು, ದಬ್ಬಾಳಿಕೆಯಿಂದ ಕೂಡಿತ್ತು. ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಜನಿಸಿದ ಯುವ ಪೀಳಿಗೆಗೆ ಆಗಿನ ಆಡಳಿತ ಎಷ್ಟೊಂದು ಅಮಾನುಷ, ಅಮಾನವೀಯತೆಯಿಂದ ಕೂಡಿತ್ತು ಎಂಬ ಕಲ್ಪನೆಯೂ ಬರಲಿಕ್ಕಿಲ್ಲ. ಬ್ರಿಟಿಷ್ ಆಡಳಿತಗಾರರ ಆಟದ ಮೈದಾನದಲ್ಲಿ ಭಾರತೀಯ ಪ್ರಜೆ ಕಾಲಿಟ್ಟರೆ, ಕಠಿಣ ಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು. ಈ ಒಂದು ಉದಾಹರಣೆ ಅಂದಿನ ಆಳ್ವಿಕೆಯ ಕ್ರೌರ್ಯಕ್ಕೆ ಸಾಕ್ಷಿ. ಆಗಸ್ಟ್ 15, 1947 ರಂದು ಭಾರತವು ದಾಸ್ಯದ ಸಂಕೋಲೆಯನ್ನು ಕಳಚಿಕೊಂಡು ಸ್ವತಂತ್ರವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಘಟನೆ ಬೆಣ್ಣೆಯೊಳಗಿನ ಕೂದಲೆಳೆ ತೆಗೆದಷ್ಟು ಸರಳವಾಗೇನು ಆಗಿಲ್ಲ. ಜನರ ಧೀರೋದಾತ್ತ ಹೋರಾಟ, ತ್ಯಾಗ ಬಲಿದಾನಗಳ ಮೂಲಕ ಇದು ದಕ್ಕಿದೆ. ಭಾರತ ಸ್ವಾತಂತ್ರ್ಯ ಪಡೆದ ಬಗೆ ಯಾವುದು? ಸ್ವಾತಂತ್ರ್ಯ ಪಡೆಯಲು ಅನುಸರಿಸಿದ ಮಾರ್ಗ ಯಾವುದು? ಹೋರಾಟದ ರೂವಾರಿಗಳಾರು? ಮುಂದಿನ ಪೀಳಿಗೆಗೆ ಈ ಹೋರಾಟದ ಚರಿತ್ರೆ ಹೇಗೆ ಮಾರ್ಗದರ್ಶಿಯಾದೀತು? ಇಂಥ ಹಲವಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು 'ಭಾರತ ರಾಷ್ಟ್ರೀಯ ಚಳುವಳಿ'ಯ ಘಟನಾವಳಿಗಳನ್ನು ವಿಶ್ಲೇಷಿಸಿ ಅಧ್ಯಯನ ಮಾಡುವುದು ಅಗತ್ಯ.

ಭಾರತದಲ್ಲಿ ಬ್ರಿಟಿಶರ ಸಾಮ್ರಾಜ್ಯ ಸ್ಥಾಪನೆ ಮತ್ತು ಅದರ ವಿಸ್ತರಣೆ ಎಲ್ಲವೂ ಸುಸೂತ್ರವಾಗಿ ನಡೆದು ಹೋಯಿತೆಂದು ಹೇಳಲಿಕ್ಕಾಗದು. ಸಾಮ್ರಾಜ್ಯ ಸ್ಥಾಪನೆಯ ಸಮಯದಲ್ಲೇ ಸಾಕಷ್ಟು ವಿರೋಧ, ಆತಂಕ, ಅಡೆತಡೆಗಳು ವ್ಯಕ್ತವಾದವು. ರಾಜಕೀಯ, ಸಾಮಾಜಿಕ, ಧಾರ್ಮಿಕ ಜೀವನದ ಮೇಲೆ ನಡೆದ ದಾಳಿಯಿಂದಾಗಿ ಎಲ್ಲ ಜನ ವಿಭಾಗಗಳಲ್ಲಿ ಅತೃಪ್ತಿ ಅಸಮಧಾನ ಮೂಡಿತು. ಜನತೆಯ ಆ ಕ್ರೋಧವು 1857 ರ ಬಂಡಾಯದಲ್ಲಿ ಪರ್ಯವಸಾನಗೊಂಡಿತು. ಘಟನೆಯನ್ನು 'ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ' ಎಂದು ಬಣ್ಣಿಸಲಾಗಿದೆ. ಇಂಥ ಪ್ರತಿಭಟನೆಯ ಮುಂದುವರಿದ ಭಾಗವೆ 'ಭಾರತ ರಾಷ್ಟ್ರೀಯ ಚಳುವಳಿ'.

ಭಾರತ ರಾಷ್ಟ್ರೀಯ ಚಳುವಳಿ ಒಂದೇ ರೀತಿಯಲ್ಲಿ ನಡೆದಿಲ್ಲ. ಪ್ರಾರಂಭದಲ್ಲಿ ಮೆದು ಧೋರಣೆಯುಳ್ಳ ಕೆಲವು ನಾಯಕರು ಭಾರತೀಯರ ಅಹವಾಲುಗಳನ್ನು ಸರಕಾರಕ್ಕೆ ಮುಟ್ಟಿಸಿ ಕೆಲವು ಅನುಕೂಲತೆಗಳನ್ನು ಪಡೆದುಕೊಳ್ಳುವ ಉದ್ದೇಶದಿಂದ ಚಳುವಳಿಯನ್ನು ಪ್ರಾರಂಭಿಸಿದರು. ಜನರ ಜ್ವಲಂತ ಸಮಸ್ಯೆಗಳಿಗೆ ಸರಕಾರ ಸ್ಪಂದಿಸದೆ ಹೋಯಿತು. ಕ್ಷಾಮ, ಪಿಡುಗುಗಳು ಜನರನ್ನು ಬಾಧಿಸಿದಾಗ ಜನತೆ ಕಂಗಾಲಾದಾಗಲೂ ಆಡಳಿತಗಾರರು ಉತ್ತಮ ಆಚರಣೆಯಲ್ಲಿ ನಿರತರಾದರೆ ಹೊರತು ಜನರ ಸಹಾಯಕ್ಕೆ ಬರಲಿಲ್ಲ. ಪರಿಸ್ಥಿತಿ ಹೀಗಿರುವಾಗ ರಾಷ್ಟ್ರೀಯ ಚಳುವಳಿ ಉಗ್ರಗಾಮಿ, ಕ್ರಾಂತಿಕಾರಕ ಆಯಾಮಗಳನ್ನು ಪಡೆಯಿತು. ಬ್ರಿಟಿಷರ ಒಡೆದು ಆಳುವ ನೀತಿ ಎಷ್ಟೇ ಪರಿಣಾಮಕಾರಿಯಾಗಿ ಕೆಲಸ ಮಾಡಿದಾಗ್ಯೂ ಜನರ ಐಕ್ಯತೆಯಿಂದ ಕೂಡಿದ ನಿರಂತರ ಹೋರಾಟದ ಮುಂದೆ ಆ ನೀತಿ ನಿಷ್ಕ್ರಿಯೆಯಾಯಿತು. ಕೊನೆಗೆ ಈ ದೇಶದಿಂದ ನಿರ್ಗಮಿಸುವುದು ಬ್ರಿಟಿಶರಿಗೆ ಅನಿವಾರ್ಯವಾಯಿತು.

ನಮಗೆ ಸ್ವಾತಂತ್ರ್ಯ ಸಿಕ್ಕಿ 50 ವರ್ಷಗಳು ಗತಿಸಿವೆ. ಆರ್ಥಿಕ ಸ್ವಾವಲಂಬನೆಗಾಗಿ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಸಮಾಜವಾದಿ ಸಮಾಜದ ರಚನೆಗೆ ದೃಢ ಸಂಕಲ್ಪ

ಮಾಡಲಾಯಿತು. ಆದರೆ ಕಾಲ ಸರಿದಂತೆ 'ಸಮಾಜವಾದಿ ಸಮಾಜ' ಪದಗಳು ನಮ್ಮ ಆಲೋಚನೆಯಿಂದ ಜಾರಿವೆ. ಜಾಗತೀಕರಣ, ಖಾಸಗೀಕರಣ ಆ ಸ್ಥಳಕ್ಕೆ ವಕ್ಕರಿಸಿವೆ. ಸಾಮ್ರಾಜ್ಯಶಾಹಿ ಹೊಸ ವೇಷ ಧರಿಸಿ - ನವ ಸಾಮ್ರಾಜ್ಯಶಾಹಿ-ಭಾರತದ ನೆಲದ ಮೇಲೆ ಮತ್ತೆ ಕಾಲಿಟ್ಟಿದೆ. ಉತ್ಪಾದನೆ ಹಾಗೂ ಸೇವೆಗಳ ಎಲ್ಲ ವಿಭಾಗಗಳಲ್ಲಿ ತನ್ನ ಖಾತೆ ತೆರೆಯಲು ನವ ಸಾಮ್ರಾಜ್ಯಶಾಹಿ ಹವಣಿಸುತ್ತಿದೆ. ಖಾಸಗೀಕರಣವು ಆರ್ಥಿಕ ಸಮಸ್ಯೆಗಳಿಗೆ 'ರಾಮಬಾಣ' ಎಂಬ ಭ್ರಮೆಯುಳ್ಳ ನಮ್ಮ ಬಂಡವಾಳಿಗರು ಬಹುರಾಷ್ಟ್ರೀಯ ಕಂಪನಿಗಳಿಗೆ ಆತಿಥ್ಯ ನೀಡಲು ತುದಿಗಾಲ ಮೇಲೆ ನಿಂತಿದ್ದಾರೆ. ಈ ಪ್ರಕ್ರಿಯೆ ಈಗಾಗಲೇ ಪ್ರಾರಂಭವಾಗಿ ಅದರ ಕಪ್ಪು ಮುಖ ನಮಗೆ ಪರಿಚಯವಾಗ ಹತ್ತಿದೆ. ಅದರ ವಿರಾಟ್ ಸ್ವರೂಪ ನೋಡುವುದು ಬಾಕಿ ಇದೆ.

ಐಕ್ಯತೆ ಹಾಗೂ ರಾಷ್ಟ್ರೀಯ ಮನೋಭಾವದ ಅಭಾವದಿಂದ ಹಿಂದೊಮ್ಮೆ ಬ್ರಿಟಿಷ್ ಸಾಮಾಜ್ಯಶಾಹಿಯ ಕಬಂಧಬಾಹುವಿಗೆ ಸಿಲುಕಿದ್ದರೆ, ಅದೆ ಈಗ ಪುನರಾವರ್ತನೆಯಾಗುವುದರಲ್ಲಿ ಸಂಶಯವಿಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಪಿಮುಷ್ಠಿ ಹಿಡಿತವಾಗಿದ್ದರೆ, ನವಸಾಮ್ರಾಜ್ಯ ಶಾಹಿಯದು 'ಅಕ್ಟೋಪಸ್' ಹಿಡಿತ ಎಂಬುದನ್ನು ನಾವು ಮನಗಾಣಬೇಕು. ಈ ಎಲ್ಲಾ ಸಂಗತಿಗಳನ್ನು ನಮ್ಮ ಯುವಕರು ಅರ್ಥಮಾಡಿಕೊಳ್ಳುವುದು ಅವಶ್ಯಕವಾಗಿದೆ.

ಕರ್ನಾಟಕದ ಭಾರತ ಜ್ಞಾನ ವಿಜ್ಞಾನ ಸಮಿತಿ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಅಂಗವಾಗಿ ಭಾರತ ರಾಷ್ಟ್ರೀಯ ಚಳುವಳಿಯನ್ನು ಪರಿಚಯಿಸುವ ಕಾರ್ಯಕ್ರಮವನ್ನು ರೂಪಿಸಿತು. ಕರ್ನಾಟಕ ಸರಕಾರವು ಸಹಾಯದ ಅಭಯ ಹಸ್ತ ನೀಡಿತು. ರಾಜ್ಯದ ಕೊಡಗು ಜಿಲ್ಲೆಯ ನಾಪೋಕ್ಲು ಮತ್ತು ಬೆಳಗಾವಿ ಜಿಲ್ಲೆ ಗೊಡಚಿಗಳಲ್ಲಿ ಕ್ರಮವಾಗಿ 26-27 ನವೆಂಬರ್ 98 ಮತ್ತು 12, 13 ಡಿಸೆಂಬರ್ 1998 ರಂದು ಶಿಕ್ಷಕರ ಕಾರ್ಯಾಗಾರಗಳನ್ನು ಏರ್ಪಡಿಸಿ, ಭಾರತ ರಾಷ್ಟ್ರೀಯ ಚಳುವಳಿಯ ವಿವಿಧ ಹಂತಗಳನ್ನು ಅಧ್ಯಯನ ಮಾಡಲಾಗಿದೆ. ಶಾಲಾ ಪಠ್ಯಪುಸ್ತಕಗಳಿಗಿಂತ ಹೆಚ್ಚಿನ ಮಾಹಿತಿ ನೀಡಲು ಇಲ್ಲಿ ಪ್ರಯತ್ನಿಸಿದೆ. ಈ ಎರಡೂ ಕಾರ್ಯಾಗಾರಗಳಲ್ಲಿ ಮಂಡಿಸಲಾದ ಲೇಖನಗಳ ಸಂಗ್ರಹಣೆ ಈ ಪುಸ್ತಕ.

ಈ ಪುಸ್ತಕವು ಮುಖ್ಯವಾಗಿ ನಾಲ್ಕು ಲೇಖನಗಳನ್ನು ಹೊಂದಿದೆ. ಡಾ. ಜಿ.ರಾಮಕೃಷ್ಣ ಅವರು ರಾಷ್ಟ್ರೀಯ ಚಳುವಳಿಯ ಮೂರು ಹಂತದ ಘಟನಾವಳಿಗಳನ್ನು ವಿದ್ವತ್ ಪೂರ್ಣವಾಗಿ 'ಸ್ವಾತಂತ್ರ್ಯ ಸಂಗ್ರಾಮದ ಮೊದಲ ಹೆಜ್ಜೆಗಳು' ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

ಪ್ರೊ. ಜಿ.ಎಂ.ಶ್ರೀನಿವಾಸಯ್ಯ ಅವರ 'ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ವಿವಿಧ ಹಂತಗಳು' ಲೇಖನ ಸ್ವಾತಂತ್ರ್ಯ ಚಳುಳಿಯ ಸಮಗ್ರ ಚಿತ್ರವನ್ನು ನೀಡುತ್ತದೆ. ನನ್ನ ಲೇಖನ 'ಭಾರತದ ರಾಷ್ಟ್ರೀಯ ಚಳುವಳಿ-ಗಾಂಧೀಜಿ ನಾಯಕತ್ವದಲ್ಲಿ' ಗಾಂಧೀಜಿಯವರ ಹೋರಾಟದ ವಿಧಾನಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲು ಪ್ರಯತ್ನಿಸಿದ್ದೇವೆ.

ಲೇಖನಗಳನ್ನು ನೀಡಿ ಈ ಪುಸ್ತಕ ಪ್ರಕಟಣೆಗೆ ಸಹಕರಿಸಿದ ಮಹನೀಯರಿಗೆ ಧನ್ಯವಾದಗಳು. ಕಾರ್ಯಾಗಾರಗಳಿಗೆ ಹಾಜರಾಗಿ, ಚರ್ಚೆಯಲ್ಲಿ ಪಾಲ್ಗೊಂಡ ಎಲ್ಲ ಶಿಕ್ಷಕರ ಅಭಿನಂದನಾರ್ಹರು.

ಮುಖಪುಟ, ಒಳಪುಟ ಚಿತ್ರ ರಚಿಸಿಕೊಟ್ಟ ಶ್ರೀ ದೇಸಾಯಿ, ಸಂಕಲ್ಪ ಗ್ರಾಫಿಕ್ಸ್, ಡಿಟಿಪಿ ಮಾಡಿಕೊಟ್ಟ ಅಕ್ಷರ ವಿನ್ಯಾಸದ ಗೆಳೆಯರಿಗೆ, ಸಹಾಯ ಸಹಕಾರ ನೀಡಿದ ಸ್ವಾತಂತ್ರ್ಯೋತ್ಸವ ಸಮಿತಿಯವರಿಗೆ ವಿಶೇಷವಾಗಿ ಶಿಕ್ಷಣ ಇಲಾಖೆಗೆ ಅನಂತ ಧನ್ಯವಾದಗಳು.

**ಬಿ.ಎಸ್.ಸೊಪ್ಪಿನ**

# ಪರಿವಿಡಿ

# ಸ್ವಾತಂತ್ರ್ಯ ಸಂಗ್ರಾಮದ ಮೊದಲ ಹೆಜ್ಜೆಗಳು

**ಡಾ॥ ಜಿ. ರಾಮಕೃಷ್ಣ**

ವಸಾಹತು ದೌರ್ಜನ್ಯಕ್ಕೆ ಗುರಿಯಾಗಿದ್ದ ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ಅರ್ಧಶತಮಾನ ಕಳೆದಿದೆ. ಎರಡು ಶತಮಾನಗಳಿಗೂ ಹೆಚ್ಚು ಕಾಲ ನಮ್ಮ ಸಂಪತ್ತನ್ನು ಲೂಟಿ ಮಾಡಿದ ಬ್ರಿಟೀಶರು ವ್ಯಾಪಾರಿಗಳಾಗಿ ಬಂದು ಕ್ರಮೇಣ ಸಾಮ್ರಾಜ್ಯ ಕಟ್ಟಿಕೊಂಡಿದ್ದು ನಮ್ಮ ರಾಷ್ಟ್ರಕ್ಕೆ ಒಂದು ದೊಡ್ಡ ಆಘಾತವಾಗಿ ಪರಿಣಮಿಸಿತು. ಆ ಹೊಡೆತದಿಂದ ಚೇತರಿಸಿಕೊಳ್ಳಲು ಇನ್ನೂ ನಮಗೆ ಸಾಧ್ಯವಾಗಿಲ್ಲ. ಯಾವ ದಿಕ್ಕಿನಲ್ಲಿ ಮುನ್ನಡೆದರೆ ಇದನ್ನು ಸಾಧಿಸಬಹುದೆಂಬ ವಿಷಯವನ್ನು ನಾವು ಸಾವಧಾನವಾಗಿ ವಿಮರ್ಶಿಸಬೇಕಾಗಿದೆ. ನಾವು ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳೆಷ್ಟು ಮತ್ತು ಅವುಗಳ ಫಲ ನಮ್ಮ ಜನರಿಗೆ ಎಷ್ಟು ತಲುಪಿದೆ ಎಂಬುದನ್ನೂ ಲೆಕ್ಕಾಚಾರ ಮಾಡಬೇಕಾಗಿದೆ. ವಸಾಹತು ದರ್ಪವನ್ನು ಕುಗ್ಗಿಸುವ ಶ್ಲಾಘನೀಯ ಕೆಲಸವನ್ನು ಮಾಡಿದ ನಮ್ಮ ದೇಶ ಮತ್ತೆ ಹೊಸರೀತಿಯ ವಸಾಹತು ವ್ಯವಸ್ಥೆಯ ತೆಕ್ಕೆಗೆ ಬೀಳುತ್ತಿದೆಯೇ ಮತ್ತು ಹಾಗಿದ್ದರೆ ಅದಕ್ಕೆ ಪರಿಹಾರವೇನು ಎಂಬುದನ್ನೂ ವಸ್ತುನಿಷ್ಠವಾಗಿ ವಿಶ್ಲೇಷಣೆ ಮಾಡಿಕೊಂಡು ಸುಭದ್ರ ಸಂರಚನೆಗಳತ್ತ ಸಾಗಬೇಕಾದ್ದು ಇಂದಿನ ತುರ್ತು ಅವಶ್ಯಕತೆಯಾಗಿದೆ. ಭವಿಷ್ಯದಲ್ಲಿ ನಾವೆಂತಹ ಸಮಾಜವನ್ನು ನಿರೀಕ್ಷಿಸುತ್ತೇವೆಯೋ ಅದಕ್ಕೆ ಪೂರಕವಾದ ಅಂಶಗಳನ್ನು ಇಂದು ನಾವು ಗುರುತಿಸದಿದ್ದರೆ ನಮ್ಮ ಹಾದಿ ಸುಗಮವಾಗುವುದಿಲ್ಲ. ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಾಗ ಮುಖ್ಯವಾಗಿ ಯಾವ ಆಶಯಗಳನ್ನು ನಮ್ಮ ಜನಸಮುದಾಯ ಇರಿಸಿಕೊಂಡಿತ್ತೆಂಬುದು ಈ ಎಲ್ಲ ಆಯಾಮಗಳನ್ನೂ ಯಥಾರ್ಥವಾಗಿ ತಿಳಿದುಕೊಳ್ಳಲು ಸಹಾಯಕವಾಗುತ್ತದೆ.

ಯಾವೊಂದು ಹೋರಾಟವೂ ಒಂದೇ ಗತಿಯಲ್ಲಿ ಸಾಗುವುದಿಲ್ಲ. ಅದರಲ್ಲಿ ಏರು-ಪೇರುಗಳಿರುತ್ತವೆ, ಅಂಕು-ಡೊಂಕುಗಳಿರುತ್ತವೆ. ಪ್ರಾರಂಭದ ಹಂತದಿಂದ ಕೊನೆಯವರೆಗೂ ಒಂದೇ ಪ್ರಕಾರವಾಗಿ ಹೋರಾಟವು ನಡೆಯಲಾರದು. ಜನರ ಸೇರ್ಪಡೆ ಮತ್ತು ಹೋರಾಟಗಾರರ ಆಕಾಂಕ್ಷೆಗಳು ಕ್ರಮೇಣ ವಿಸ್ತಾರವಾಗಿ ಬೆಳೆಯುವುದು ಸ್ವಾಭಾವಿಕವಾಗಿರುತ್ತದೆ. ಒಮ್ಮೆಲೇ ಯಾರೋ ಒಬ್ಬ ಧೀರನಾಯಕ ಬಂದು ದಿಢೀರನೆ ಎಲ್ಲವನ್ನೂ ಸಾಧಿಸಿ ವಿಕ್ರಮ ಸ್ಥಾಪಿಸುವುದು ಆಗದ ಮಾತು. ಒಂದೊಂದು ಹಂತದಲ್ಲೂ ಹೊಸ ಹೊಸ ಅನುಭವಗಳು ಮತ್ತು ಅವು ತೋರಿಸುವ ಹೊಸಹಾದಿ ಹೋರಾಟವನ್ನು ರೂಪಿಸುತ್ತವೆ. ಒಂದು ಹಂತದ ಹೋರಾಟವು ಶ್ರೇಷ್ಠ ಮತ್ತು ಅದರ ಹಿಂದಿನ ಹೋರಾಟವು ಗೌಣ ಎಂದು ಚರಿತ್ರೆಯು ಎಲ್ಲೂ ಉಲ್ಲೇಖಿಸಲಾರದು. ಗುರಿಮುಟ್ಟುವ ತವಕ ಪ್ರತಿಯೊಂದು ಹಂತದಲ್ಲೂ ಇರುತ್ತದೆ; ಆದರೆ ಅನೇಕ ಚಾರಿತ್ರಿಕ ಕಾರಣಗಳು ಅದಕ್ಕೆ ಅಡೆತಡೆಗಳನ್ನೊಡ್ಡಬಹುದು.



ಭಾರತವನ್ನು ಆಕ್ರಮಿಸಿದ ತರುವಾಯದಲ್ಲಿ ಬ್ರಿಟಿಶರು ಇಲ್ಲಿಯ ಜನರ ಭಾವನೆಗಳನ್ನೂ, ಆಚಾರ-ವಿಚಾರಗಳನ್ನೂ ಸಮಗ್ರವಾಗಿ ತಿಳಿದುಕೊಳ್ಳುವ ಪ್ರಯತ್ನ ಮಾಡಿದರು. ಅದರಿಂದ ತಮ್ಮ ಆಳ್ವಿಕೆಯನ್ನು ಸುಲಭ ಮಾಡಿಕೊಳ್ಳುವುದು ಅವರ ಉದ್ದೇಶವಾಗಿತ್ತು. ಯಾವ ಭಾವನೆಗಳು ವ್ಯಾಪಕವಾಗಿ ಜನರ ಮನಸ್ಸಿನಲ್ಲಿ ಬೇರೂರಿದರೆ ಅವರಿಗೆ ಅನುಕೂಲವಾಗುತ್ತಿತ್ತೋ ಅಂತಹ ಭಾವನೆಗಳನ್ನು ಬೆಳೆಸುವುದು ಕೂಡ ಅವರ ಕ್ರಮವಾಗಿತ್ತು. ತಮ್ಮಿಂದಾಗಿ ಭಾರತವು ಒಂದು ರಾಷ್ಟ್ರದ ಸ್ವರೂಪ ಪಡೆಯಿತೆಂದು ಹೇಳುವುದು ಇದರ ಒಂದು ಭಾಗ; ತಾವಿಲ್ಲಿ ಬರುವುದಕ್ಕೆ ಮುಂಚೆ ಆಡಳಿತಾತ್ಮಕವಾಗಿ ಒಂದುಗೂಡಿದ್ದ ರಾಷ್ಟ್ರವಾಗಿ ಭಾರತವು ಇರಲೇ ಇಲ್ಲವೆಂಬ ಮಾತನ್ನು ಬ್ರಿಟಿಶ್ ಅಧಿಕಾರಿಗಳು ಹಾಗೂ ಚರಿತ್ರಕಾರರು ಪದೇ ಪದೇ ಉಸುರುತ್ತಿದ್ದರು. ಸ್ವಾತಂತ್ರ್ಯ ಹೋರಾಟವು ಇದಕ್ಕೆ ಸರಿಯಾದ ಉತ್ತರವನ್ನು ಕಾರ್ಯತಃ ಕೊಟ್ಟು ತೋರಿಸಿತು. ಇಡೀ ರಾಷ್ಟ್ರವು ಒಂದಾಗಿ ಬ್ರಿಟಿಶರನ್ನು ಹಿಮ್ಮೆಟ್ಟಿಸಿದ್ದು ಭಾರತವು ಒಂದು ಒಗ್ಗೂಡಿದ್ದ ದೇಶವಾಗಿತ್ತೋ ಇಲ್ಲವೋ ಎಂಬುದನ್ನು ತೋರಿಸಿಕೊಟ್ಟಿತು.

ತನ್ನ ಹೆಗ್ಗಳಿಕೆಯನ್ನು ಸಾರಲು ಬ್ರಿಟನ್ ಅನುಸರಿಸಿದ ಕ್ರಮವು ಸರಳವಾಗಿದೆ. ಭಾರತವನ್ನು ಒಂದಾಗಿಸಿದ್ದು ತಾನು, ಸಾರಿಗೆ-ಸಂಪರ್ಕಗಳಿಗಾಗಿ ರೈಲ್ವೆ, ಟೆಲಿಗ್ರಾಫ್ ಇತ್ಯಾದಿಗಳನ್ನು ಅಳವಡಿಸಿದ್ದು ತಾನು, ಉದ್ಯಮಗಳನ್ನು ಸ್ಥಾಪಿಸಿ ಉದ್ಯೋಗಾವಕಾಶ ಮಾಡಿಕೊಟ್ಟಿದ್ದು ತಾನು, ಇತ್ಯಾದಿಯಾಗಿ ಹೇಳಿ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳುವುದು ಆ ಕ್ರಮ. ಜನಗಳನ್ನು ವಿಭಜಿಸಿ ಆಮೇಲೆ ಅವರು ಐಕ್ಯದಿಂದ ಇರಲಾರರೆಂದು ವಿಷಾದಿಸುವುದು ಬ್ರಿಟನ್ನಿನ ಕುತಂತ್ರವಾಗಿತ್ತು. ಇದಕ್ಕೆಲ್ಲಾ ಮರುಳಾಗದೆ ಭಾರತದ ಜನತೆ ಅಂದಿನ ವಾಸ್ತವಿಕ ಪರಿಸ್ಥಿತಿಗಳಿಗನುಗುಣವಾಗಿ ವಸಾಹತುಶಾಹಿಯ ವಿರುದ್ಧ ದನಿಯೆತ್ತಿದ್ದು ಮೂಲತಃ ಬ್ರಿಟನ್ ಎಣೆಯಿಲ್ಲದೆ ನಡೆಸುತ್ತಿದ್ದ ಶೋಷಣೆಯನ್ನು ಕೊನೆಗಾಣಿಸುವುದಕ್ಕೆ. ಆದ್ದರಿಂದ ಜಾನ್ ಸ್ಟ್ರಾಚಿ, ಜಾನ್ ಸೀಲೆ, ಜಾನ್ ಮಿಲ್ ಮುಂತಾದ ಜಾನಿಗಳು ಭಾರತದ ಭೂತ ಮತ್ತು ವರ್ತಮಾನಗಳ ಬಗ್ಗೆ ಎಷ್ಟೇ ಕುಹಕದ ಮಾತುಗಳನ್ನಾಡಿದರೂ ಭಾರತದ ವಿದ್ವಾಂಸರು ಅವಕ್ಕೆ ಸೂಕ್ತವಾದ ಪ್ರತ್ಯುತ್ತರ ನೀಡುತ್ತಲೇ ಬಂದರು. ರಾಷ್ಟ್ರೀಯ ಅಹಮಿಕೆಯನ್ನು ತೋರ್ಪಡಿಸಲು ಬ್ರಿಟನ್ನಿನ ಡೊಂಕು ಗ್ರಹಿಕೆಗಳನ್ನು ಖಂಡಿಸುವ ಅಗತ್ಯವಿತ್ತು. ಒಂದೆಡೆ ರಾಜಕೀಯ ಹೋರಾಟವಾದರೆ, ಇನ್ನೊಂದೆಡೆ ಅದಕ್ಕೆ ಪೂರಕವಾಗಿ ಬೌದ್ಧಿಕ ಹೋರಾಟವು ಸಹಜವಾಗಿತ್ತು. ಮಿಲ್‌ನಂತಹವರು ಭಾರತದಲ್ಲಿ ಏನೇನೂ ಇರಲಿಲ್ಲವೆಂದು ಮೂದಲಿಕೆಯ ಮಾತನ್ನಾಡಿದ್ದರೋ ಅವೆಲ್ಲಾ ಅಜ್ಞಾನದ ಪರಿಣಾಮವೆಂದು ತೋರಿಸಲು ಪ್ರಾಚೀನ ದಾಖಲೆಗಳನ್ನು ಪರಿಶೋಧಿಸುವುದು ಒಂದು ಸಂಪ್ರದಾಯವಾಯಿತು. ರಾನಡೇ, ಜಯಸ್ವಾಲ್, ರಾಜವಾಡೆ ಮುಂತಾದವರ ಈ ಕ್ರಮದಲ್ಲಿ ಪ್ರಾಚೀನ ಭಾರತದ ವೈಭವೀಕರಣವು ಸಾಕಷ್ಟು ಜರುಗಿತಾದರೂ ಅವರೆಲ್ಲರ ಆಕಾಂಕ್ಷೆಯು ಸ್ವಾತಂತ್ರ್ಯ ಸಂಗ್ರಾಮವನ್ನು ಬಲಪಡಿಸುವುದೇ ಆಗಿದ್ದಿತು. ಇದೇ ಸಮಯದಲ್ಲಿ ಭಾರತವನ್ನು ಆರ್ಥಿಕವಾಗಿ ಬ್ರಿಟನ್ ಹೇಗೆ ದೋಚುತ್ತಿದ್ದಿತೆಂಬುದನ್ನು ಕುರಿತು ಅನೇಕ ಅಧ್ಯಯನಗಳು ನಡೆದವು. ಅವುಗಳಲ್ಲಿ ಲಾಲಾ ಲಜಪತ್ ರಾಯ್ 1917 ರಲ್ಲಿ ಪ್ರಕಟಿಸಿದ 'ಭಾರತಕ್ಕೆ ಬ್ರಿಟನ್ನಿನ ಋಣ' ಅತ್ಯಂತ



ಪ್ರಮುಖವಾದುದು. ರಾಜಕೀಯವಾಗಿ ದಾಸ್ಯವನ್ನು ಹೇರಿದ್ದ ಸಂದರ್ಭದಲ್ಲಿ ಭಾರತದ ಸಂಪತ್ತನ್ನು ಅತ್ಯಂತ ದೊಡ್ಡ ಪ್ರಮಾಣದಲ್ಲಿ ಉಗ್ರವಾಗಿ ಲೂಟಿ ಮಾಡಿ ನಮ್ಮ ದೇಶವನ್ನು ದಟ್ಟದಾರಿದ್ರ್ಯದ ಅಂಚಿಗೆ ಬ್ರಿಟನ್ ನೂಕಿದ್ದಿತೆಂದು ಲಜಪತ್ ರಾಯ್ ಅಂಕಿ-ಸಂಖ್ಯೆಗಳ ಆಧಾರದಿಂದ ಪ್ರತಿಪಾದಿಸಿದರು.

ಪ್ಲಾಸಿ ಕದನ ನಡೆದು ಬ್ರಿಟನ್ ವಸಾಹತು ಅಧಿಕಾರವನ್ನು ಪಡೆದದ್ದು 1757 ರಲ್ಲಿ. ಮಾಂಟಗೋಮರಿ ಮಾರ್ಟಿನ್ ಎಂಬಾತ 1838 ರಲ್ಲಿ ವ್ಯಾಪಕವಾದ ಲೆಕ್ಕಾಚಾರ ಮಾಡಿ 1757 ರಿಂದ ವರ್ಷಕ್ಕೆ 30 ಲಕ್ಷ ಪೌಂಡುಗಳಿಗೆ ಕಡಿಮೆಯಿಲ್ಲದೆ ಭಾರತದ ಸಂಪತ್ತನ್ನು ಬ್ರಿಟನ್ ತನ್ನದಾಗಿಸಿಕೊಂಡಿತ್ತೆಂದು ತೋರಿಸಿಕೊಟ್ಟ. ಈ ಮೊತ್ತಕ್ಕೆ ಶೇಕಡ 12 ರಷ್ಟು ಬಡ್ಡಿ ಕೂಡಿಸಿದರೆ 80 ವರ್ಷದಲ್ಲಿ 72 ಕೋಟಿ ಪೌಂಡಿನಷ್ಟು ನಿವ್ವಳ ನಷ್ಟ ಭಾರತಕ್ಕಾಗಿದೆಯೆಂದು ಆತ ಹೇಳಿದ್ದ. 1838 ರ ನಂತರದ ವರ್ಷಗಳಲ್ಲಿ ಲೂಟಿಯ ಪ್ರಮಾಣ ಇನ್ನೂ ಹೆಚ್ಚಾಗಿದ್ದಿತು. ನಮ್ಮ ದೇಶದ ಕಚ್ಚಾ ವಸ್ತುಗಳನ್ನು ದೋಚಿದ್ದಲ್ಲದೆ ಬ್ರಿಟನ್ನಿನ ಸರಕುಗಳನ್ನು ಭಾರತದ ಮಾರುಕಟ್ಟೆಗೆ ತುಂಬಲಾಗುತ್ತಿತ್ತು ಹಾಗೂ ನಮ್ಮ ಸಣ್ಣ ಉದ್ದಿಮೆಗಳನ್ನೆಲ್ಲಾ ಧ್ವಂಸ ಮಾಡಲಾಗಿತ್ತು. ಡಿಗ್ಬಿಯೆಂಬ ಒಬ್ಬಾತ ಲೆಕ್ಕ ಹಾಕಿದ್ದಂತೆ ಪ್ಲಾಸಿಯಿಂದ ವಾಟರ್‌ಲೂ ಕದನದ ಅಂತರದ ವರ್ಷಗಳಲ್ಲಿ ಭಾರತ ಕಳೆದುಕೊಂಡ ಒಟ್ಟು ಸಂಪತ್ತಿನ ಮೌಲ್ಯ ಸುಮಾರು 491 ಕೋಟಿ ಪೌಂಡುಗಳು. ಭಾರತದಲ್ಲಿ ಬಡತನ, ನಿರುದ್ಯೋಗ, ಅನಕ್ಷರತೆ ಇತ್ಯಾದಿಗಳು ಹೇರಳವಾಗಿ ಹೆಚ್ಚಲು ಈ ಎಲ್ಲ ಲೂಟಿಗಳೂ ಪರಿಣಾಮ ಬೀರುತ್ತಿದ್ದವು. (ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಡೆದಿರುವ ಅನೇಕ ವ್ಯವಹಾರಗಳನ್ನು ಈ ಹಿನ್ನೆಲೆಯಲ್ಲಿ ಪುನರವಲೋಕಿಸಿಸುವುದು ಸಾರ್ಥಕವಾಗಿರುತ್ತದೆ.)

ಭಾರತದಲ್ಲಿ ವ್ಯಾಪಾರಕ್ಕೆಂದು ಬಂದಾಗ ಬ್ರಿಟನ್ನಿನಲ್ಲಿ ಈಸ್ಟ್ ಇಂಡಿಯಾ ಕಂಪನಿ ಎಂಬುದೊಂದನ್ನು ಸ್ಥಾಪಿಸಲಾಗಿತ್ತು. 19ನೇ ಶತಮಾನದ ಆದಿಭಾಗದಲ್ಲಿ ಈ ಕಂಪನಿಯ ಲಂಡನ್ ಕಚೇರಿಯಲ್ಲಿ ಗುಮಾಸ್ತನಾಗಿದ್ದವನೊಬ್ಬ ಚಾರ್ಲ್ಸ್ ಲ್ಯಾಂಬ್; ಅವನು ಖ್ಯಾತ ಪ್ರಬಂಧಕಾರ. ಅವನ ಕುಟುಂಬದಲ್ಲಿದ್ದವರು ಮೂರು ಮಂದಿ; ಅವನು, ಅವನ ತಂಗಿ ಮತ್ತು ಅವನ ತಾಯಿ. ಕಂಪನಿಯು ಕೊಡುತ್ತಿದ್ದ ಸಂಬಳವು ಸಂಸಾರ ತೂಗಿಸಲು ಸಾಲದೆಂದು ಅವನು ಗೋಳಿಡುತ್ತಿದ್ದ. ಕಂಪನಿಯು ನಮ್ಮ ದೇಶದಿಂದ ಲೂಟಿ ಮಾಡಿದ ಸಂಪತ್ತನ್ನು ನೌಕರರಿಗೆ ಮುಟ್ಟಿಸಲಿಲ್ಲ! ಎಲ್ಲಾ ಕ್ಲೈವ್, ಹೇಸ್ಟಿಂಗ್ಸ್ ಮುಂತಾದವರಂತಹವರ ಖಜಾನೆ ತುಂಬಿಸಲು ಸಾಕಾಯಿತು. ಇದೇ ವರ್ಷಗಳಲ್ಲಿ ಡಾ. ಕ್ಲರ್ಕ್ ಎಂಬುವವನೊಬ್ಬ ಮೂರು ವರ್ಷಗಳ ಕಾಲ ಮದ್ರಾಸಿನಲ್ಲಿದ್ದು ಕಂಪನಿಗಾಗಿ ಕೆಲಸ ಮಾಡಿ ಹಿಂದಿರುಗಿದಾಗ ಒಂದು ಲಕ್ಷ ಇಪ್ಪತ್ತೈದು ಸಾವಿರ ಪೌಂಡು ತೆಗೆದುಕೊಂಡು ಹೋಗಿದ್ದನಂತೆ. ಅದನ್ನು ಲ್ಯಾಂಬ್‌ಗೂ ಸ್ನೇಹಿತನಾಗಿದ್ದ ಡಿಕ್ವನ್ಸಿ ಎಂಬ ಪ್ರಬಂಧಕಾರ ತನ್ನ ಸ್ಮೃತಿಗಳನ್ನು ದಾಖಲಿಸಿರುವ ಗ್ರಂಥದಲ್ಲಿ 1810 ರಲ್ಲಿ ಉಲ್ಲೇಖಿಸಿದ್ದ. ನಮ್ಮ ದೇಶವು ವಸಾಹತು ರಾಷ್ಟ್ರವಾಗಿ ಎಷ್ಟು ಅಗಾಧವಾದ ಶೋಷಣೆ ಮತ್ತು ದೌರ್ಜನ್ಯಗಳಿಗೆ ಗುರಿಯಾಗಿತ್ತೆಂಬುದನ್ನು ಇದರಿಂದ ಗ್ರಹಿಸಬೇಕು. ಭಾರತವನ್ನು ಬಿಟ್ಟು ತೊಲಗಲು ಇಷ್ಟವಿಲ್ಲದುದಕ್ಕೆ ಬ್ರಿಟನ್ನಿಗೆ ಈ ಸಂಪತ್ತಿನ ಆಕರ್ಷಣೆ ಪ್ರಬಲವಾದ ಕಾರಣ; ಅದರ ವಿರುದ್ಧ ಹೋರಾಟ ನಡೆಸಿದವರನ್ನು ಬ್ರಿಟನ್ ಸ್ವೇಚ್ಛೆಯಿಂದ ದಮನ ಮಾಡಲು ಉಪಕ್ರಮಿಸಿದ್ದು ಕೂಡ ಈ ಸಂಪತ್ತನ್ನು



ಸೂರೆಮಾಡುವ ಅವಕಾಶವನ್ನು ಕಳೆದುಕೊಳ್ಳದಿರಲು ಎಂಬುದನ್ನು ಒತ್ತಿಹೇಳಬೇಕಾಗಿದೆ.


ಸಿಪಾಯಿ ದಂಗೆ

ಹೀಗೆ ವಿರೋಧ ಮಾಡಿದವರಲ್ಲಿ 1857 ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ವೀರರು ಮೊದಲಿಗರು. ಅದನ್ನು ಬ್ರಿಟನ್ನಿನ ಚರಿತ್ರಕಾರರು 'ಸಿಪಾಯಿ ದಂಗೆ' ಎಂದು ಕರೆದರು; ಆದರೆ ಬ್ರಿಟನ್ನಿನಲ್ಲೇ ವಾಸವಾಗಿದ್ದ ಕ್ರಾಂತಿಕಾರಿ ಚಿಂತಕ ಕಾರ್ಲ್ ಮಾರ್ಕ್ಸ್ ಅದನ್ನು 'ಭಾರತದ ಸ್ವಾತಂತ್ರ್ಯ ಸಂಗ್ರಾಮ' ಎಂದು ಬಣ್ಣಿಸಿದ. ಅದು ಪ್ರಾರಂಭವಾದದ್ದು ಬ್ಯಾರಕ್‌ಪುರದ ಸೈನಿಕ ಠಾಣೆಯಲ್ಲಿದ್ದ ಮಂಗಲ ಪಾಂಡೆ ಎಂಬುವವನ ನಾಯಕತ್ವದಲ್ಲಿದ್ದ ಸೈನಿಕರ ಕಾರ್ಯಾಚರಣೆಯಿಂದ ಎಂಬುದು ನಿಜ; ಆದರೆ ಕೇವಲ ಸೈನಿಕರ ಅಸಮಾಧಾನವಷ್ಟೇ ಅದಕ್ಕೆ ದೊಡ್ಡ ಆಯಾಮವನ್ನು ಕಲ್ಪಿಸಿಕೊಡಲಿಲ್ಲ. ವಸಾಹತು ದೌರ್ಜನ್ಯದಿಂದ ಬೇಸತ್ತಿದ್ದ ಜನತೆಗೆ ಸೈನಿಕರ ದಂಗೆಯು ಒಂದು ಒಳ್ಳೆಯ ಸಂದರ್ಭವನ್ನು ಒದಗಿಸಿಕೊಟ್ಟಿತು. ಸಂಪ್ರದಾಯವಾದಿಗಳು, ಪಾಳೆಗಾರರು, ಊಳಿಗಮಾನ್ಯ ಪದ್ಧತಿಯಲ್ಲಿ ಅಧಿಕಾರ ಹೊಂದಿದ್ದವರು, ಮುಂತಾದವರು ಸಹ ಈ ಸಂಗ್ರಾಮದ ಸನ್ನಿವೇಶವನ್ನು ಉಪಯೋಗಿಸಿಕೊಂಡು ಬ್ರಿಟನ್ನಿನ ವಿರುದ್ಧ ಬಂಡೆದ್ದರು. ಅವರಲ್ಲದೆ ಝಾನ್ಸಿ ರಾಣಿ, ತಾಂತ್ಯ ಟೋಪಿ ಮುಂತಾದ ಉದಾತ್ತ ಹೋರಾಟಗಾರರೂ ಈ ಸಂಗ್ರಾಮದಲ್ಲಿ ಅಗ್ರಸ್ಥಾನದಲ್ಲಿದ್ದರು. 1836 ರಷ್ಟು ಮುಂಚೆಯೇ ಆಗಿನ ಗವರ್ನರ್ ಜನರಲ್ ಮೆಟ್ಕಾಫ್ ಒಂದು ವರದಿಯಲ್ಲಿ ಹೀಗೆ ಬರೆದಿದ್ದ: 'ನಮ್ಮ ಪತನವನ್ನು ಇಡೀ ಭಾರತ ಕಾತುರದಿಂದ ಎದುರುನೋಡುತ್ತಿದೆ. ಅದನ್ನು ಆಗುಮಾಡಲು ತಮ್ಮ ಶಕ್ತಿಯನ್ನು ಯಥಾಶಕ್ತಿ ಬಳಸಲು ಅನೇಕ ಮಂದಿ ಸಿದ್ಧರಾಗಿದ್ದರೆ'. ಆದರೆ ಅದನ್ನು ವಾಸ್ತವಿಕವಾಗಿ ಸಿದ್ಧಿಸಿಕೊಳ್ಳಲು ಮುಂದೆ ಇನ್ನೂ 90 ವರ್ಷ ಕಾಯಬೇಕಾಗಿ ಬಂತು.

ಭಾರತದಿಂದ ಬ್ರಿಟನ್ನಿಗೆ ಹತ್ತಿಯನ್ನು ಕಳಿಸಲಾಗುತ್ತಿದ್ದ ಕಾಲ ಅದು. ಲಂಕಾಷೈರ್ ಗಿರಣಿಗಳಿಗೆ



ಅದೇ ಮೂಲಾಧಾರ. 1882 ರಲ್ಲಿ ಬ್ರಿಟನ್ನಿನ ಸರ್ಕಾರ ಒಂದು ಆಜ್ಞೆ ಹೊರಡಿಸಿ ಹತ್ತಿಯ ಆಮದಿನ ಮೇಲಿನ ಸುಂಕವನ್ನು ರದ್ದು ಮಾಡಿತು; ಅಂದರೆ, ಬ್ರಿಟನ್ನಿನ ಖಾಸಗಿ ಮಾಲಿಕರಿಗೆ ಲಾಭವನ್ನು ಹೆಚ್ಚಿಸಿಕೊಳ್ಳಲು ಅವಕಾಶ ಮಾಡಿಕೊಟ್ಟತು ಎಂದರ್ಥ. ಭಾರತದ ರೈತಾಪಿ ಜನರ ದಾರುಣ ಪರಿಸ್ಥಿತಿ ಇನ್ನೂ ಹದಗೆಟ್ಟತು ಎಂದೂ ಅದರರ್ಥ. 19ನೆಯ ಶತಮಾನದ ಪೂರ್ವಾರ್ಧದಲ್ಲಿ ಭಾರತವು ಏಳು ಬಾರಿ ಭೀಕರ ಕ್ಷಾಮವನ್ನು ಕಂಡಿದ್ದಿತು; ಉತ್ತರಾರ್ಧದಲ್ಲಿ ಅದು 24 ಕ್ಕೆ ಏರಿತು. ಅದರ ಪರಿಣಾಮವಾಗಿ ಸುಮಾರು ಮೂರು ಕೋಟಿ ಜನ ಸತ್ತರು. 1857 ರಲ್ಲಿ ದಕ್ಷಿಣ ಭಾರತದ ಹಲವೆಡೆಗಳಲ್ಲಿ ರೈತ ಸಮುದಾಯವು ಬಂಡೆದ್ದಿತೆಂಬುದನ್ನು ಇಲ್ಲಿ ನೆನೆಯಬಹುದು. ಜನರು ಬ್ರಿಟನ್ನಿನ ವಸಾಹತುಶಾಹಿ ದರ್ಪವನ್ನು ಅಡಗಿಸಲು ಸಜ್ಜಾಗುತ್ತಿದ್ದರೆಂದು ಅದರಿಂದ ಸ್ಪಷ್ಟವಾಗಿತ್ತು.

ಜನರ ಕೋಪವನ್ನು ತಗ್ಗಿಸಲು ಏನಾದರೂ ಕ್ರಮ ಕೈಗೊಳ್ಳದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ಬರಬಹುದೆಂಬ ಶಂಕೆ ಬ್ರಿಟಿಶರಿಗಿತ್ತು. ಅಂತಹ ಪ್ರಯತ್ನಗಳಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯನ್ನು 1885 ಪ್ರಾರಂಭಿಸಿದ್ದೂ ಒಂದು. ಆದರೆ ಬಹುಮಟ್ಟಿಗೆ ಮೊದಲಿಂದಲೇ ಆ ಸಂಸ್ಥೆಯು ಬ್ರಿಟಿಶ್ ಅಧಿಕಾರಕ್ಕೆ ಆಸರೆ ನೀಡುವ ಬದಲು ವಿರೋಧಿ ಪ್ರಕ್ರಿಯೆಯಲ್ಲಿ ತೊಡಗಿತು. ಅದನ್ನು ಸ್ಥಾಪಿಸಿದ ಮಹನೀಯರಲ್ಲಿ ಬ್ರಿಟಿಶ್ ಆಡಳಿತಾಧಿಕಾರಿ ಎ.ಓ.ಹ್ಯೂಮ್ ಪ್ರಮುಖನಾಗಿದ್ದ. 1882 ರವರೆಗೆ ಆತ ಅಧಿಕಾರಿಯಾಗಿದ್ದವನು. ಗುಪ್ತದಳಗಳ ವರದಿಗಳಿಂದ ಭಾರತದ ಬೇರೆ ಬೇರೆ ಭಾಗಗಳಲ್ಲಿ ಜನರ ಸಿಟ್ಟು ಎಷ್ಟಿದ್ದಿತೆಂದು ಆತನಿಗೆ ತಿಳಿದಿತ್ತು. ಲಿಟ್ಟನ್ ಎಂಬಾತ ವೈಸ್‌ರಾಯ್ ಆಗಿದ್ದಾಗ ಇಲ್ಲಿಯ ಸನ್ನಿವೇಶವು ಕ್ರಾಂತಿಕಾರಿ ಚಟುವಟಿಕೆಗಳಿಗೆ ಪ್ರೇರಣೆ ಕೊಡುವಂತಿತ್ತೆಂದು ಹ್ಯೂಮ್ ಮನಗಂಡಿದ್ದನೆಂದು ಆತನ ಜೀವನಚರಿತ್ರಕಾರ ವಿಲಿಯಂ ವೆಡರ್ಬರ್ನ್ ತಿಳಿಸುತ್ತಾನೆ. ಸರಿಸುಮಾರು ಇದೇ ಕಾಲದಲ್ಲಿ ದಾದಾಭಾಯಿ ನವರೋಜಿಯವರಂತಹ ಧೀಮಂತರು ಬ್ರಿಟನ್ನಿನ ದುರಾಡಳಿತದ ಬಗ್ಗೆ ಸಾರ್ವಜನಿಕವಾಗಿ ಖಂಡನೆಯ ಮಾತುಗಳನ್ನಾಡಲು ಆರಂಭಿಸಿದ್ದರು. ತನ್ನ ದೇಶದಲ್ಲಿ ಜನರ ಪರವಾಗಿ ಕಾನೂನನ್ನು ಜಾರಿಗೊಳಿಸಿ ಆಡಳಿತ ನಡೆಸುವ ಬ್ರಿಟನ್ನಿನ ಸರ್ಕಾರವು ಭಾರತದಲ್ಲಿ ಯಾವ ನಿಯಮಗಳಿಗೂ ಬೆಲೆ ಕೊಡದೆ ಜನರ ಶೋಷಣೆಗೆ ಕಾರಣವಾಗುವಂತೆ ಸರ್ಕಾರ ನಡೆಸುತ್ತದೆ ಎಂಬುದು ನವರೋಜಿಯವರ ಆಪಾದನೆಯಾಗಿತ್ತು. ಅದನ್ನು ಸೋದಾಹರಣವಾಗಿ ವಿವರಿಸಿ ಅವರೊಂದು ಪುಸ್ತಕವನ್ನು ಬರೆದಿದ್ದರು. ಇದಕ್ಕೆ ಪ್ರತಿಯಾಗಿ ಏನಾದರೂ ಕ್ರಮ ತೆಗೆದುಕೊಳ್ಳುವುದು ವಸಾಹತುಸರ್ಕಾರಕ್ಕೆ ಅನಿವಾರ್ಯವಾಗಿತ್ತು. ಜನರ ಪ್ರತಿನಿಧಿಗಳ ಸಮಿತಿಯೊಂದನ್ನು ರಚಿಸಿ ಅದರ ಸಲಹೆಗಳನ್ನು ಪಡೆಯುವುದು ಅತ್ಯಂತ ಕನಿಷ್ಠ ಅಗತ್ಯವಾಗಿತ್ತು. ಆದ್ದರಿಂದ 1885 ರಲ್ಲಿ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಿದನ್ನು ಬ್ರಿಟಿಶ್ ಸರ್ಕಾರವು ಸ್ವಾಗತಿಸಿತು.

ಆಗ ವೈಸ್‌ರಾಯ್ ಆಗಿದ್ದವನು ಡಫರಿನ್ ಎಂಬುವವನು. ಕಾಂಗ್ರೆಸ್ಸಿನ ಮೊದಲ ಅಧ್ಯಕ್ಷ ಡಬ್ಲ್ಯು.ಸಿ.ಬ್ಯಾನರ್ಜಿ ತಿಳಿಸಿರುವಂತೆ ಭಾರತದ ಪ್ರಮುಖರು ಕೆಲವರು ವರ್ಷಕ್ಕೊಮ್ಮೆ ಒಂದೆಡೆ ಸೇರಿ ದೇಶದ ಹಿತದ ಬಗ್ಗೆ ತಮ್ಮ ಅನಿಸಿಕೆಗಳನ್ನೂ ಸಲಹೆಗಳನ್ನೂ ನೀಡಿದರೆ ಬ್ರಿಟಿಶ್ ಸರ್ಕಾರಕ್ಕೆ



ವಿರೋಧದ ಬದಲಾಗಿ ಸಹಕಾರದ ವಾತಾವರಣ ಮೂಡಬಹುದೆಂದು ಡಫರಿನ್ನನ ಆಶಯವಾಗಿತ್ತು. ಸ್ವತಃ ಹ್ಯೂಮ್ ಬ್ರಿಟನ್ನಿನ ರಾಣಿಗೆ ಎಷ್ಟು ವಿಧೇಯನಾಗಿದ್ದನೆಂದರೆ ಕಾಂಗ್ರೆಸ್ಸಿನ ಮೊದಲನೆ ಅಧಿವೇಶನದಲ್ಲಿ ಸಾಮ್ರಾಜ್ಞಿಗೆ ಪರಾಕು ಹೇಳುವ ಕೆಲಸವನ್ನು ಅವನು ಅತಿ ವಿನಯದಿಂದ ಮಾಡಿದ. ಈಗ ಲಭ್ಯವಿರುವ ಅಧಿಕೃತ ವರದಿಯ ಪ್ರಕಾರ "ಸಾಮ್ರಾಜ್ಞಿಯ ಪಾದರಕ್ಷೆಗಳ ಹುರಿಯನ್ನು ಬಿಚ್ಚಲು ಸಹ ಯೋಗ್ಯನಲ್ಲದವನು" ತಾನೆಂದು ಹೇಳಿಕೊಂಡು ಆಕೆಯ ಲಕ್ಷಗಟ್ಟಲೆ ಮಕ್ಕಳ ಪೈಕಿ ತಾನೂ ಒಬ್ಬನೆಂದು ಹ್ಯೂಮ್ ಹೇಳಿದ್ದನಂತೆ. ಅಂದರೆ, ವಸಾಹತುಶಾಹಿಯ ಕಡುವಿರೋಧವನ್ನು ಇಂತಹ ನಾಯಕರಿಂದ ಕಾಂಗ್ರೆಸ್ ಅಪೇಕ್ಷಿಸುವಂತಿರಲಿಲ್ಲ. ಬ್ರಿಟನ್ನಿನಿನ ಆಡಳಿತದಲ್ಲಿ ಅಷ್ಟೊಂದು ಶ್ರದ್ಧೆಯಿದ್ದವರೇ ಹೆಚ್ಚಾಗಿದ್ದ ಆ ಮೊದಲ ಕಾಂಗ್ರೆಸ್ ಅಧಿವೇಶನದಲ್ಲಿ ಒಂಬತ್ತು ನಿರ್ಣಯಗಳನ್ನು ಅಂಗೀಕರಿಸಲಾಯಿತು. ಅವೆಲ್ಲಾ ಆಡಳಿತಾತ್ಮಕ ಸೂತ್ರಗಳಿಗೆ ಸಂಬಂಧಪಟ್ಟವೇ ಆಗಿದ್ದವು. ನೇರವಾಗಿ ವಸಾಹತು ಕ್ರಮವನ್ನು ಪ್ರಶ್ನಿಸುವ ಮನೋಭಾವ ಅಲ್ಲಿ ಪ್ರಕಟವಾಗಿರಲಿಲ್ಲ. ಶಾಸನ ಸಮಿತಿಯಲ್ಲಿ ಕೆಲವು ಚುನಾಯಿತ ಪ್ರತಿನಿಧಿಗಳಿಗೆ ಅವಕಾಶವಿರಬೇಕೆಂದು ಆಗ್ರಹ ಪಡಿಸಿದ್ದೊಂದೇ ಸ್ವಾತಂತ್ರ್ಯದ ಹಂಬಲದ ಕುರುಹಾಗಿತ್ತು. ರಾಷ್ಟ್ರೀಯ ಪ್ರಜ್ಞೆಯು ಸಂಪೂರ್ಣವಾಗಿ ಅಂಕುರಿಸಿರಲಿಲ್ಲವಾದರೂ ಅದಕ್ಕೆ ಅಗತ್ಯವಾದ ಪೂರ್ವಪೀಠಿಕೆಯು ಕಾಂಗ್ರೆಸ್ಸಿನ ಅಧಿವೇಶನದಿಂದ ರಚನೆಗೊಂಡಿತೆನ್ನಬಹುದು. ದೇಶದ ನಾನಾ ಭಾಗದ ಜನ ಒಂದೆಡೆ ಕಲೆತು ತಮ್ಮ ಅನುಭವ ಮತ್ತು ಅನಿಸಿಕೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳಲು ಹಾಗೂ ಕ್ರಿಯಾಶೀಲರಾಗಲು ಒಂದು ಬಲಿಷ್ಠ ಸಂಘಟನೆಗೆ ಆ ಮೊದಲ ಅಧಿವೇಶನವು ನಾಂದಿ ಹಾಡಿತು.

ಭಾರತದ ರಾಷ್ಟ್ರೀಯತೆಯು ಮುಂದಿನ ದಶಕಗಳಲ್ಲಿ ಅನೇಕ ಹೋರಾಟಗಳ ಮುಖಾಂತರ ವ್ಯಕ್ತವಾಯಿತು ಮತ್ತು ಗಟ್ಟಿಯಾಗುತ್ತಾ ಬೆಳೆಯಿತು. ಇದನ್ನು ಮೂರು ಹಂತಗಳಲ್ಲಿ ಗುರುತಿಸಲು ಸಾಧ್ಯವಿದೆ. ಒಂದೊಂದು ಹಂತವೂ ಮುಂದಿನ ಉನ್ನತ ಹಂತಕ್ಕೆ ಬುನಾದಿಯನ್ನು ಹಾಕಿಕೊಟ್ಟಿತು ಮತ್ತು ತನ್ನ ವಿಶಿಷ್ಟ ಗಾಢ ಪ್ರಭಾವವನ್ನು ಇಡೀ ಚಳುವಳಿಯ ಮೇಲೆ ದಟ್ಟವಾಗಿ ಬೀರಿತು. 1885ರಿಂದ ಸುಮಾರು ಎರಡು ದಶಕಗಳ ಕಾಲ ಕಾಂಗ್ರೆಸ್ಸಿನಲ್ಲಿ ಸ್ವಯಮಾಡಳಿತ ಎಂಬ ಪರಿಕಲ್ಪನೆ ಮೂಡಿ ಬರಲಿಲ್ಲ. ಬ್ರಿಟನ್ನಿನ ಆಡಳಿತದ ಪರಿಧಿಯಲ್ಲೇ ಸ್ಥಳೀಯರಿಗೆ ಹೆಚ್ಚಿನ ಸೂಕ್ತ ಪ್ರಾತಿನಿಧ್ಯವಿರಬೇಕೆಂಬ ಬೇಡಿಕೆಯೊಂದೇ ಆ ಕಾಲದಲ್ಲಿ ಬಹಿರಂಗವಾಗಿ ವ್ಯಕ್ತವಾಗಿತ್ತು. ಹೀಗೆ ಪ್ರಾತಿನಿಧ್ಯವಿರಬೇಕಾದರೆ ಪ್ರತಿನಿಧಿ ಸಂಸ್ಥೆಗಳು ಸಹ ಹೆಚ್ಚಾಗಬೇಕೆಂಬ ಬಯಕೆ ಸಾಕಷ್ಟು ವ್ಯಾಪಕವಾಗಿ ಹಬ್ಬಿತ್ತು. ಆಗಿನ ಒಟ್ಟು ಮನೋಭಾವವನ್ನು ಅರಿಯಲು 1890ರಲ್ಲಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದ ರಮೇಶಚಂದ್ರ ದತ್ ಅವರ ಮಾತುಗಳನ್ನು ಗಮನಿಸಬಹುದು : "ಭಾರತದ ಜನತೆಗೆ ತಕ್ಷಣದ ಬದಲಾವಣೆಗಳು, ಕ್ರಾಂತಿಗಳು ಬೇಕಾಗಿಲ್ಲ...... ಈಗಿನ ಸರ್ಕಾರವನ್ನು ಬಲಗೊಳಿಸಲು ಹಾಗೂ ಅದನ್ನು ಜನರ ಹತ್ತಿರಕ್ಕೆ ತರಲು ಅವರು ಬಯಸುತ್ತಾರೆ. ಭಾರತದ ಕೃಷಿ ಮತ್ತು ಉದ್ಯಮಗಳನ್ನು ಪ್ರತಿನಿಧಿಸುವ ಕೆಲವು ಭಾರತೀಯ ಸದಸ್ಯರು ವೈಸ್‌ರಾಯ್‌ರವರ ಕಾರ್ಯ ಸಮಿತಿಯಲ್ಲಿರಬೇಕೆಂಬುದು ಅವರ ಇಚ್ಛೆ. ಹಾಗೆಯೇ ಪ್ರತಿಯೊಂದು ಪ್ರಾಂತ್ಯದಲ್ಲೂ ಇಂತಹ ಸಮಿತಿಗಳಿರಬೇಕು."



1889ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಬ್ರಿಟನ್ನಿನ ಒಬ್ಬ ಪಾರ್ಲಿಮೆಂಟ್ ಸದಸ್ಯ, ಡಬ್ಲ್ಯೂ.ಎಸ್.ಕೇನ್ ಎಂಬುವನು ಬಂದಿದ್ದ. ಅವನು ಬರೆದ: "ಇಲ್ಲಿ ನಾಲ್ಕು ಸಾವಿರ ಮಂದಿ ಬಂದಿದ್ದಾರೆ. ಕಾನೂನು, ವೈದ್ಯಕೀಯ, ತಂತ್ರಜ್ಞಾನ, ಸಾಹಿತ್ಯ, ಮುಂತಾದ ಕ್ಷೇತ್ರಗಳಿಂದ ಬಂದಿರುವವರು ಇವರು". ಅಂದರೆ, ಜನಸಾಮಾನ್ಯರು ಅಲ್ಲಿಗೆ ಬಂದಿರಲಿಲ್ಲವೆಂದರ್ಥ. ನಂತರದ ವರ್ಷಗಳಲ್ಲಿ ಪ್ರಮುಖ ಪಾತ್ರ ವಹಿಸಿದ ಫಿರೋಜ್ ಶಾ ಮೆಹ್ತಾ ಹೇಳಿದ್ದಂತೆ, "ಕಾಂಗ್ರೆಸ್ ಎಂಬುದು ಜನ ಸಮುದಾಯದ ಧ್ವನಿಯೇನಲ್ಲ; ಅವರ ಪರವಾಗಿ ಶಿಕ್ಷಿತ ಭಾರತೀಯರು ಸಲಹೆ-ಸೂಚನೆಗಳನ್ನು ನೀಡಲು ಅದೊಂದು ವೇದಿಕೆಯಾಗಿತ್ತು." 1898ರ ಅಧಿವೇಶನದ ಅಧ್ಯಕ್ಷರಾಗಿದ್ದ ಆನಂದ ಮೋಹನ್ ಬೋಸರ ಪ್ರಕಾರ ವಿದ್ಯಾವಂತ ಭಾರತೀಯರು ಬ್ರಿಟಿಷರ ಸ್ನೇಹಿತರು ಹಾಗೂ ಕಾರ್ಯಾಚರಣೆಯಲ್ಲಿ ಜೊತೆಗೂಡುವವರೂ ಆಗಿದ್ದರು. ಸುರೇಂದ್ರನಾಥ ಬ್ಯಾನರ್ಜಿ ಸಹ ಇಂಥವೇ ಅಭಿಪ್ರಾಯ ಹೊಂದಿದ್ದರು.

ಈ ಮಾತುಗಳನ್ನು ಪರಾಮರ್ಶೆ ಮಾಡುವಾಗ ಅಂದಿನ ನಾಯಕರೆಲ್ಲಾ ಭಾರತದ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಬೆಳೆಸಿಕೊಂಡಿರದಿದ್ದವರಾಗಿದ್ದರೆಂದು ಹೇಳಬಾರದು. ಚಾರಿತ್ರಿಕವಾಗಿ ಈ ಘಟ್ಟದಲ್ಲಿ ರಾಷ್ಟ್ರೀಯತೆಯ ಹರಹು ಅದಕ್ಕಿಂತ ಹೆಚ್ಚಾಗಿರುವಂತಿರಲಿಲ್ಲ. ಬಹಿರಂಗವಾಗಿ ಒಂದು ಸಂಘಟಿತ ಪಕ್ಷವನ್ನು ರಚಿಸಿದ್ದೇ ಅಂದಿನ ಪುರೋಗಾಮಿತನ. ಎಲ್ಲೂ ಹೋರಾಟದ ಚಿಂತನಾ ಕ್ರಮ ಮತ್ತು ಕಾರ್ಯಕ್ರಮಗಳು ಥಟ್ಟನೆ ಹುಟ್ಟಿಕೊಂಡು ಪ್ರಾರಂಭದಲ್ಲೇ ಅತಿ ಎತ್ತರಕ್ಕೆ ಏರುವುದಿಲ್ಲ. ಅವು ಕ್ರಮೇಣ ವಿಕಾಸವಾಗುವಂತಹವು. 1857ರ ಹೋರಾಟಗಾರರಿಗೆ 1942ರ ಹೋರಾಟಗಾರರಿಗಿದ್ದ ಹಿನ್ನೆಲೆ ಇರಲಿಲ್ಲ. ಗುಣಾತ್ಮಕವಾಗಿ ಅವೆರಡೂ ಕಾಲಗಳ ಹೋರಾಟಗಾರರ ಪ್ರಜ್ಞೆ, ಸಾಕಷ್ಟು ಸಾಂದ್ರವಾಗಿಯೇ ಇತ್ತು. ಅದು ವ್ಯಕ್ತವಾದದ್ದು ಬೇರೆ ಬೇರೆ ಮಟ್ಟಗಳಲ್ಲಿ ಅಷ್ಟೇ. ಲೋಕಮಾನ್ಯ ತಿಲಕರು ಮಹಾತ್ಮ ಗಾಂಧಿಯವರಿಗಿಂತ ಕಡಿಮೆ ದೇಶಭಕ್ತಿ ಇದ್ದವರಲ್ಲ. ಆದರೂ ಅವರು "ಭಾರತ ಬಿಟ್ಟು ತೊಲಗಿ" ಎಂಬ ಘೋಷಣೆ ಕೊಡಲಿಲ್ಲ. "ಸ್ವರಾಜ್ಯ ನನ್ನ ಜನ್ಮ ಸಿದ್ಧಹಕ್ಕು" ಎಂದಷ್ಟೇ ಅವರು ಹೇಳಬಲ್ಲವರಾಗಿದ್ದರು. ಚಾರಿತ್ರಿಕವಾಗಿ ಎರಡು ಘಟ್ಟಗಳೂ ಪ್ರಮುಖವಾದುವೇ; ಅವುಗಳಲ್ಲಿ ಉಚ್ಚ-ನೀಚ ಎಂಬ ಪ್ರಭೇದಕ್ಕೆ ಅರ್ಥವಿಲ್ಲ. ಒಂದು ಇನ್ನೊಂದರ ವಿಕಾಸವಾಗಿರುತ್ತದಾದ್ದರಿಂದ ಅದು ಹಿಂದಿನದಕ್ಕಿಂತಲೂ ವಿಶಾಲವಾಗಿರುತ್ತದೆ. ಅಲ್ಲದೆ, ಯಾವುದೇ ಒಂದು ಘಟ್ಟದಲ್ಲಿ ಏಕಪ್ರಕಾರವಾದ ಚಿಂತನೆ ಮತ್ತು ಕ್ರಿಯೆಯನ್ನು ಇತಿಹಾಸದಲ್ಲಿ ನಿರೀಕ್ಷಿಸಲಾಗುವುದಿಲ್ಲ. ಒಂದೊಂದು ಘಟ್ಟದಲ್ಲೂ ತೋರಿಬರುವ ಪ್ರತಿಯೊಂದು ಹೊಳೆಗೂ ತನ್ನದೇ ಆದ ಪ್ರಾಶಸ್ತ್ಯವಿರುತ್ತದೆ. ಯಾವುದೋ ಒಂದು ಹೊಳೆ ಮಾತ್ರವೇ ಸ್ವಾತಂತ್ರ್ಯದ ಬೆಳೆಯನ್ನು ಬೆಳೆಸಿತೆಂದು ಭಾವಿಸುವುದು ಇದರಿಂದಾಗಿ ಚಾರಿತ್ರಿಕ ಅಸತ್ಯವಾಗುತ್ತದೆ. ಮುಂದಿನ ಕಾಲ ಘಟ್ಟಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಗಾಂಧೀಜಿ ಮತ್ತು ರಾಜ್‌ಘಾಟ್‌ಗೆ ಇರುವ ಪ್ರಾಶಸ್ತ್ಯ ಭಗತ್ ಸಿಂಗ್ ಮತ್ತು ಹುಸೇನಿವಾಲಾಕ್ಕೂ ಸಲ್ಲುತ್ತದೆ, ಸಲ್ಲಬೇಕು. ಇದನ್ನು ಮರೆತರೆ ಜನಸಮುದಾಯದ ಕೆಲವು ಪ್ರತ್ಯೇಕ ಭಾಗಗಳನ್ನು ಉಪೇಕ್ಷಿಸಿದಂತೆ ಆಗುತ್ತದೆ. ದಾದಾಭಾಯಿ ನವರೋಜಿಯವರ ಸಮಕಾಲೀನರಿಗೂ ಇದು ಅನ್ವಯಿಸುತ್ತದೆ. ಒಂದು ಕಡೆ, ಕೆಲವು




ಭಗತ್‌ಸಿಂಗ್

ವಿದ್ಯಾವಂತರು ಕಲೆತು ಕಾಂಗ್ರೆಸ್ ವೇದಿಕೆಯನ್ನು ನಿರ್ಮಿಸಿಕೊಂಡು ಬ್ರಿಟಿಷ್ ಸರ್ಕಾರಕ್ಕೆ ಅಹವಾಲುಗಳನ್ನು ಸಲ್ಲಿಸುತ್ತಿದ್ದರೆ, ಇನ್ನೊಂದು ಕಡೆ ಜನಸಾಮಾನ್ಯರು ನೇರವಾಗಿ ಬ್ರಿಟಿಷರ ಕಾನೂನು ಕಟ್ಟಳೆಗಳ ವಿರುದ್ಧ ಹೋರಾಡುತ್ತಿದ್ದರು. ವಿಶೇಷವಾಗಿ ರೈತಾಪಿ ಜನರ ಚಳುವಳಿಗಳು ಅಂತಹವಾಗಿದ್ದವು. ಎರಡು ಪ್ರಕ್ರಿಯೆಗಳೂ ಚಳುವಳಿಯನ್ನು ಮುಂದಿನ ಮೇಲಿನ ಹಂತಕ್ಕೇರಿಸುವುದಕ್ಕೆ ಅನುವಾದವು. ಕಾಂಗ್ರೆಸ್ ಅಧಿವೇಶನಗಳಲ್ಲಿ ಸಮಾಜ ಸುಧಾರಣೆ, ಶಿಕ್ಷಣ, ಆಧುನಿಕೀಕರಣ, ಔದ್ಯಮಿಕ ಹಾಗೂ ತಾಂತ್ರಿಕ ಬೆಳೆವಣಿಗೆ, ಮುಂತಾದ ವಿಷಯಗಳ ಬಗ್ಗೆ ಚರ್ಚೆಯಾಗುತ್ತಿತ್ತು, ನಿರ್ಣಯಗಳನ್ನು ಸ್ವೀಕರಿಸಲಾಗುತ್ತಿತ್ತು. ಸಮೂಹ ಪ್ರಜ್ಞೆಯು ಕ್ರಮೇಣ ಉನ್ನತ ಮಟ್ಟಕ್ಕೆ ಏರಲು ಇವೆಲ್ಲಾ ಸಹಾಯಕವಾಗಿದ್ದವು. 1887 ರಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಯಾರೋ ಒಬ್ಬ ಪ್ರತಿನಿಧಿ ಬಂದಿದ್ದನಂತೆ; ಅವನ ಜಿಲ್ಲೆಯ ಅಧಿಕಾರಿ ಇದನ್ನು ವಿರೋಧಿಸಿದ್ದರೂ ಆತ ಅಧಿವೇಶನಕ್ಕೆ ಬಂದ. ಹಿಂದಿರುಗಿದ ನಂತರ ಜಿಲ್ಲೆಯಲ್ಲಿ ಯಾವ ಚಟುವಟಿಕೆಯನ್ನೂ ಜನರ ಮಧ್ಯೆ ಹರಡಕೂಡದೆಂದು ಅಧಿಕಾರಿ ಆಜ್ಞೆ ವಿಧಿಸಿದ ಮತ್ತು ಅವನಿಂದ 20,000 ರೂಪಾಯಿಗಳ ಠೇವಣಿ ಪಡೆದುಕೊಂಡ. ಆಜ್ಞೆಯನ್ನು ಉಲ್ಲಂಘಿಸಿದರೆ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಅಧಿಕಾರಿ ಹೇಳಿದ. ಅಂದರೆ, ವಸಾಹತು ಸರ್ಕಾರದ ದಬ್ಬಾಳಿಕೆ ಎಲ್ಲ ಹಂತಗಳಲ್ಲೂ ಇದ್ದದ್ದೇ; ಪ್ರತಿಭಟನೆಯೂ ಹಾಗೆಯೇ ಎಲ್ಲ ಹಂತಗಳಲ್ಲೂ ಇತ್ತು. ಅವುಗಳ ಪರಿಮಾಣದಲ್ಲಿ ವ್ಯತ್ಯಾಸಗಳಿದ್ದುವು, ಅಷ್ಟೇ. ಪ್ರತಿಭಟನೆಗಾಗಿ ಕ್ರಮೇಣ ಹೆಚ್ಚು ಹೆಚ್ಚು ಜನ ಆಸಕ್ತಿ ತೋರಿಸುತ್ತಿದ್ದುದು ಒಂದು ಚಾರಿತ್ರಿಕ ಸಂಗತಿ.

ಬ್ರಿಟಿಷ್ ಸರ್ಕಾರದ ಪ್ರತಿಕ್ರಿಯೆಯು ಕಾಂಗ್ರೆಸ್‌ನ ಲಕ್ಷಣವನ್ನು ಬದಲಾಯಿಸುತ್ತಾ ಹೋಯಿತು. ತಮ್ಮ ನಿರ್ಣಯಗಳಿಗೆ ಮತ್ತು ಅಹವಾಲುಗಳಿಗೆ ಪುಡಿಕಾಸಿನ ಕಿಮ್ಮತ್ತೂ ಇಲ್ಲವೆಂದು ಕಾರ್ಯತಃ ಗೊತ್ತಾದಾಗ ಕಾಂಗ್ರೆಸ್ ಅಧಿವೇಶನಗಳಲ್ಲಿ ಪ್ರತಿನಿಧಿಗಳು ಸಹಜವಾಗಿಯೇ ಕಾರ್ಯವಿಧಾನವನ್ನು ಬದಲಾಯಿಸಿಕೊಂಡು ತೀವ್ರಮಾರ್ಗಗಳ ಹುಡುಕಾಟ ಆರಂಭಿಸಿದರು. ಗೋಖಲೆಯಂತಹ ಮಿತವಾದಿಗಳು ಸಹ ಕೊನೆ ಕೊನೆಗೆ ಬ್ರಿಟಿಷ್ ಸರ್ಕಾರದ ನೀತಿಗಳನ್ನು ಬೇಸರದಿಂದ ಪರಿಗಣಿಸಬೇಕಾಗಿ ಬಂದಿತ್ತು. ರಾಷ್ಟ್ರೀಯ ಹೋರಾಟದ ಎರಡನೆಯ ಹಂತ ಅದರಿಂದ ಪ್ರಾರಂಭವಾಯಿತೆನ್ನಬಹುದು. ಸಾಮ್ರಾಜ್ಯಶಾಹಿ ಬ್ರಿಟಿಷ್ ಸರ್ಕಾರದೊಡನೆ ಯಾವ ಮೈತ್ರಿ ಸಂಬಂಧವೂ ಸಲ್ಲದೆಂಬ ಧೋರಣೆ ಈ



ಹಂತದಲ್ಲಿ ಪ್ರಬಲವಾಗಿ ಮೂಡಿಬಂತು. 1890ರ ದಶಕದಲ್ಲಾಗಲೇ ಇದು ತಕ್ಕಮಟ್ಟಿಗೆ ಕಂಡುಬಂದಿತ್ತಾದರೂ ವ್ಯವಸ್ಥಿತವಾಗಿ ಅದಕ್ಕೊಂದು ಸ್ವರೂಪವನ್ನು ಕೊಟ್ಟಿದ್ದು 1905ರ ಸುಮಾರಿನಲ್ಲಿ. ಅದು ಬಾಲ ಗಂಗಧಾರ ತಿಲಕರ ವಿಶಿಷ್ಟ ಕೊಡುಗೆ. ರೈತಾಪಿ ಜನರ ಹೋರಾಟಗಳಿಗೆ ಪೂರಕವಾಗಿ ನಗರಗಳಲ್ಲಿ ಕಾರ್ಮಿಕರ ಮತ್ತು ಮಧ್ಯಮ ವರ್ಗದವರ ಹೋರಾಟಗಳನ್ನು ಅಣಿಗೊಳಿಸುವ ತಂತ್ರ ಅವರದಾಗಿತ್ತು. ಅವರ ಸಮಕಾಲೀನರಲ್ಲಿ ಬಿಪಿನ್ ಚಂದ್ರ ಪಾಲ್, ಲಾಲಾ ಲಜಪತ್ ರಾಯ್, ಅರವಿಂದ ಘೋಷ್ ಮುಂತಾದವರು ಈ ಹೊಸ ಹಾದಿಯನ್ನು ಕ್ರಮಿಸಲು ಮುಂದಾದರು. ಖುದಿರಾಮ್ ಬೋಸ್, ಛಾಪೇಕರ್ ಸಹೋದರರು, ಇತ್ಯಾದಿಗಳು ವೈಯಕ್ತಿಕವಾಗಿ ಬ್ರಿಟಿಷ್ ಅಧಿಕಾರಿಗಳನ್ನು ಕೊಲ್ಲುವುದರಿಂದ ತಮ್ಮ ಕ್ರೋಧವನ್ನು ಪ್ರಕಟಿಸಿ ಗಲ್ಲಿಗೇರಿದ್ದರು. ಅಂಥದೇ ಕ್ರಿಯೆಯನ್ನು ಮುಂದುವರಿಸಿಕೊಂಡು ಹೋಗಬೇಕೆಂದು ತಿಲಕರಾದಿಯಾಗಿ ಯಾರೂ ಹೇಳಲಿಲ್ಲ; ಆದರೆ ಆ ಪರಂಪರೆಯನ್ನು ಸಂಪೂರ್ಣವಾಗಿ ಅವಹೇಳನವನ್ನೂ ಮಾಡಲಿಲ್ಲ.

ಬ್ರಿಟನ್ನಿನ ಶಕ್ತಿಯನ್ನು ಮುರಿಯಲು ಜನರೆಲ್ಲಾ ಒಂದಾಗಿ, ಸಾಮೂಹಿಕ ಕಾರ್ಯಾಚರಣೆಯಲ್ಲಿ ತೊಡಗಬೇಕೆಂಬುದನ್ನು ಸ್ಪಷ್ಟವಾಗಿ ಅರಿತು ಅದಕ್ಕಾಗಿ ಸಂಘಟನೆ ಮಾಡಹೊರಟವರಲ್ಲಿ ತಿಲಕರು ಮೊದಲ ಸಾಲಿನ ಶ್ರೇಷ್ಠರು. ನಮ್ಮ ಅಗಾಧ ದೇಶ, ಅದರ ಸಾವಿರಾರು ವರ್ಷಗಳ ಚರಿತ್ರೆ, ಇತ್ಯಾದಿಗಳ ಮುಂದೆ ಚಿಕ್ಕ ದ್ವೀಪವಾದ ಬ್ರಿಟನ್ ಹೇಗೆ ತಾನೆ ಸ್ಥೈರ್ಯದಿಂದ ನಿಲ್ಲಬಲ್ಲುದು ಎಂಬುದನ್ನು ಜನಮನದ ಆಳದಲ್ಲಿ ಬಿತ್ತುವುದು ಅವರ ಧೋರಣೆಯಾಗಿತ್ತು. ಅವರು ಆಗಾಗ್ಗೆ ಹೇಳುತ್ತಿದ್ದರಂತೆ: "ನಮ್ಮ ದೇಶದ ಪ್ರತಿಯೊಬ್ಬ ಪ್ರಜೆಯೂ ಒಂದೊಂದು ಹಿಡಿ ಮಣ್ಣನ್ನು ತೆಗೆದುಕೊಂಡು ಹೋಗಿ ಬ್ರಿಟನ್ನಿನ ಮೇಲೆ ಹಾಕಿದರೆ ಆ ದ್ವೀಪವು ಒಂದು ದೊಡ್ಡ ಮಣ್ಣುಗುಡ್ಡೆಯಾಗಿ ಹೋಗುತ್ತದೆ. ಅಂತಹ ದ್ವೀಪದ ಕೆಲವು ಸಾವಿರ ಜನರ ದಬ್ಬಾಳಿಕೆಯನ್ನು ಕೊನೆಗಾಣಿಸಲು ನಮ್ಮ ಬೃಹತ್ ಜನಸ್ತೋಮಕ್ಕೆ ಸಾಧ್ಯವಿಲ್ಲವೆ? ಏಳಿ, ನಮ್ಮ ಜನ್ಮ ಸಿದ್ಧ ಹಕ್ಕಾದ ಸ್ವಾತಂತ್ರ್ಯವನ್ನು ಪಡೆಯೋಣ, ಬನ್ನಿ". ರಾಷ್ಟ್ರೀಯತೆಯ ಪ್ರಜ್ಞೆ ಹಿಂದಿಗಿಂತಲೂ ಮೇಲು ಮಟ್ಟದ್ದಾಗಿತ್ತೆಂಬುದು ಇದರಿಂದ ಸಾಬೀತಾಗುತ್ತದೆ.

ಜನರನ್ನು ಹೀಗೆ ಒಗ್ಗೂಡಿಸಲು ತಿಲಕರು ಅನುಸರಿಸಿದ ಒಂದು ಕ್ರಮವನ್ನು ನಾವು ತಪ್ಪಾಗಿ ಅರ್ಥೈಸಿಕೊಳ್ಳಬಾರದು. ಅವರ ಚಾರಿತ್ರಿಕ ಹಿನ್ನೆಲೆಯಲ್ಲಿ ಅವರು ಕೈಗೊಂಡ ಒಂದು ಪದ್ಧತಿಯನ್ನು ಇಂದು ಪರಮತದ್ವೇಷದ ಚಿಹ್ನೆಯೆಂದು ವ್ಯಾಖ್ಯಾನಿಸುವುದು ತಪ್ಪಾಗುತ್ತದೆ. ಅಂತೆಯೇ, ಅವರು ಅನುಸರಿಸಿದ ಕ್ರಮದ ಹಿಂದಿನ ಆಕಾಂಕ್ಷೆಯನ್ನು ಕೈಬಿಟ್ಟು ಅದೇ ಪದ್ಧತಿಗೆ ಮರುಜೀವ ಕೊಡುವುದು ಕೂಡ ಅಬದ್ಧವಾಗುತ್ತದೆ. ಅವರ ಒಂದು ಪದ್ಧತಿಯೆಂದರೆ ಸಾಮೂಹಿಕವಾಗಿ ಗಣೇಶ ಪೂಜೆ ಮತ್ತು ವಿಸರ್ಜನೆಗಳನ್ನು ಸಂಯೋಜಿಸುವುದು. ಇದರಲ್ಲಿ ಸಾವಿರಾರು ಜನರು ಪಾಲ್ಗೊಳ್ಳುವುದು ಮಹಾರಾಷ್ಟ್ರದ ಅನೇಕ ಪಟ್ಟಣ ಹಾಗೂ ನಗರಗಳ ಜನತೆಗೆ ರಾಷ್ಟ್ರೀಯತೆಯ ಪ್ರತೀಕವಾಯಿತು. ಅದರಿಂದ ಒಂದು ಮತದವರ ಪ್ರತಿಷ್ಠೆಯನ್ನು ಪ್ರಕಟಿಸುವುದು ಅಥವಾ ಹಿಗ್ಗಿಸುವುದು ತಿಲಕರ ಉದ್ದೇಶವಾಗಿರಲಿಲ್ಲ. ಬೇರೆ ಮತದವರ ಸಾಮೂಹಿಕ ಸಮಾರಂಭಗಳನ್ನೂ ಅವರು ಅಷ್ಟೇ ಉತ್ಸಾಹ ಮತ್ತು ವಿನಯಗಳಿಂದ



ಸ್ವಾಗತಿಸುತ್ತಿದ್ದರು. ರಾಷ್ಟ್ರೀಯತೆಯೆಂದರೆ ಅವರ ದೃಷ್ಟಿಯಲ್ಲಿ ಭಾರತದ ಎಲ್ಲ ಮತಧರ್ಮೀಯರ ಸಮಾನತೆ, ಸಮಾನ ಆಕಾಂಕ್ಷೆಗಳು ಹಾಗೂ ಧರ್ಮೀಯ ಪ್ರತ್ಯೇಕತೆಗಳು ಸಮ್ಮಿಳಿತವಾಗಿದ್ದವು. ಯಾವ ಮತಧರ್ಮಗಳನ್ನೂ ಒಳಗು-ಹೊರಗು, ಶ್ರೇಷ್ಠ-ಕನಿಷ್ಠ ಎಂಬ ರೀತಿಯಲ್ಲಿ ವಿಭಜಿಸುವುದು ಅವರ ಉದಾತ್ತ ದೃಷ್ಟಿಗೆ ಹೊರತಾಗಿತ್ತು.

ಬ್ರಿಟಿಷ್ ವಸಾಹತು ಸರ್ಕಾರದ ಜೊತೆ ಒಂದು ರೀತಿಯ ಸಹಕಾರವು ಗೋಖಲೆಯವರ ಮಾರ್ಗವಾದರೆ ಅದಕ್ಕೆ ಭಿನ್ನವಾಗಿ ಬ್ರಿಟಿಷರನ್ನು ಸಂಪೂರ್ಣವಾಗಿ ವಿರೋಧಿಸುವುದು ತಿಲಕರ ಮಾರ್ಗವಾಯಿತು. ಈ ಕಾರಣಕ್ಕಾಗಿ ಅವರ ಪಂಥವನ್ನು ತೀವ್ರಗಾಮಿ ಪಂಥವೆಂದು ಕರೆಯುವುದು ವಾಡಿಕೆಯಲ್ಲಿತ್ತು. ತಿಲಕರಂತಹ ನಾಯಕರು ವಸಾಹತುಶಾಹಿಯನ್ನು ಕಿತ್ತೊಗೆಯಲು ಆತುರದಿಂದಿದ್ದರು, ನಿಜ; ಆದರೆ ಅದಕ್ಕೆ ಅಗತ್ಯವಾದ ವ್ಯಾಪಕ ಚಳುವಳಿ ಇನ್ನೂ ಬೆಳೆದಿರಲಿಲ್ಲ. ಜನಸಾಮಾನ್ಯರು ಕ್ರಿಯಾಶೀಲರಾಗಿರುತ್ತಿದ್ದರೇನೋ; ಆದರೆ ನಾಯಕರು ಅವರನ್ನಿನ್ನೂ ಸಮೀಪಿಸಿರಲಿಲ್ಲ. ಸಾರ್ವಜನಿಕರ ಪಾಲ್ಗೊಳ್ಳುವಿಕೆಯು ವಿಶಾಲವಾಗಿ ಹರಡದೆ ತಿಲಕರ ಚಳುವಳಿ ಫಲಪ್ರದವಾಗುವಂತಿರಲಿಲ್ಲ. ಮಧ್ಯಮ ವರ್ಗದ ಜನರಿಗೆ ಹಾಗೂ ಯುವಕರಿಗೆ ತಿಲಕರ ಸಂದೇಶ ಮುಟ್ಟಿತ್ತು. ಆದರೆ ಅದಿನ್ನೂ ಭದ್ರನೆಲೆಯನ್ನು ಕಂಡುಕೊಂಡಿರಲಿಲ್ಲ. ಅಲ್ಲದೇ, ಕಾಂಗ್ರೆಸ್‌ನಲ್ಲಿ ರಾಜಕೀಯವಾಗಿ ತಿಲಕರ ನಿಲುವಿಗೆ ತೀವ್ರ ವಿರೋಧವಿತ್ತು. 1907ರಲ್ಲಿ ಸೂರತ್‌ನಲ್ಲಿ ಜರುಗಿದ ಒಂದು ಕಾಂಗ್ರೆಸ್ ಅಧಿವೇಶನದಲ್ಲಿ ತಿಲಕ್ ಅವರ ಗುಂಪಿಗೂ ಗೋಖಲೆಯವರ ಗುಂಪಿಗೂ ತೀವ್ರವಾದ ವಾಗ್ಯುದ್ಧ ನಡೆದು ಕಡೆಗೆ ಅದು ದೈಹಿಕ ಮಾರಾಮಾರಿಯಲ್ಲಿ ಕೊನೆಗೊಂಡಿತ್ತು. ಅಲ್ಲಿ ತಿಲಕರಿಗೆ ಸೋಲುಂಟಾಗಿತ್ತು. ಅವರೊಡನೆ ಹೋರಾಟಕ್ಕಿಳಿದಿದ್ದವರಿಗೆ ಸಹನೆ ಮೀರಿತ್ತು. ಆದರೆ ಜನಬಲ ಇನ್ನೂ ಕೂಡಿಬಂದಿರಲಿಲ್ಲ. ದುಡಿಯುವ ಜನರನ್ನು ಸಂಘಟಿಸುವುದರಲ್ಲಿ ಅನೇಕ ಪ್ರಯತ್ನಗಳು ನಡೆಯುತ್ತಿದ್ದುವು; ಆದರೆ ತಿಲಕರಿಗೆ ಅದರೊಡನೆ ನೇರ ಸಂಬಂಧ ಏರ್ಪಟ್ಟಿರಲಿಲ್ಲ.

ಸಾರ್ವಜನಿಕ ಹೋರಾಟದ ನೆಲೆಯಲ್ಲಿ ನಿಂತು ವಿಶ್ಲೇಷಣೆ ಮಾಡಿದ್ದರೆ ತಮ್ಮ ತೀವ್ರಗಾಮಿತನದ ಸೀಮಿತತೆಯು ತಿಲಕರಿಗೆ ತಿಳಿಯುತ್ತಿತ್ತು. ಹಾಗಿಲ್ಲದಾಗ ಅವರು ಗೋಖಲೆ ಪಂಥದವರ ಹುಳುಕುಗಳನ್ನು ಗುರುತಿಸುವಾಗ “ಪಾಶ್ಚಿಮಾತ್ಯ ಪ್ರಭಾವ” ಅಥವಾ “ರಾಷ್ಟ್ರೀಯ ಭಾವದ ಅಭಾವ” ಎಂಬ ಟೀಕೆಯನ್ನು ಮಾತ್ರ ಮಾಡಬಲ್ಲವರಾದರು. ಆರ್ಥಿಕ-ಸಾಮಾಜಿಕ ಪ್ರಶ್ನೆಗಳ ಹಿನ್ನೆಲೆಯಲ್ಲಿ ಪರಸ್ಪರರ ವ್ಯತ್ಯಾಸಗಳು ಪ್ರಮುಖವಾಗುವುದರ ಬದಲು ಮಂದಗಾಮಿಗಳು ಹಾಗೂ ತೀವ್ರಗಾಮಿಗಳ ನಡುವೆ “ರಾಷ್ಟ್ರೀಯತೆ” ಎಂಬುದು ಎಷ್ಟು ಆಳವಾಗಿತ್ತೆಂಬ ಅಮೂರ್ತ ಪ್ರಶ್ನೆಗೆ ಪ್ರಾಮುಖ್ಯತೆ ದೊರೆಯಿತು. ಸಾಮಾಜಿಕವಾಗಿ ಸಂಪ್ರದಾಯ ಬದ್ಧತೆಯು ತೀವ್ರಗಾಮಿಗಳಿಗೆ ಒಂದು ಹೊರೆಯಾದದ್ದು ಈ ಕಾರಣದಿಂದ. ರಾಜಕೀಯವಾಗಿ ಪ್ರಗತಿಯ ಹಾದಿಯಲ್ಲಿದ್ದವರು ಸಾಮಾಜಿಕವಾಗಿ ಪ್ರತಿಗಾಮಿಗಳಾದದ್ದು ಒಂದು ಸೋಜಿಗ. ಇದು ಎಷ್ಟರ ಮಟ್ಟಿಗಿತ್ತೆಂದರೆ 1890ರಲ್ಲಿ ಹೆಣ್ಣುಮಕ್ಕಳ ವಿವಾಹದ ವಯೋಮಿತಿಯನ್ನು 10ರಿಂದ 12ಕ್ಕೆ ಏರಿಸಬೇಕೆಂಬ ಪ್ರಸ್ತಾಪ ಬಂದಾಗ ತಿಲಕರು ಅದನ್ನು ವಿರೋಧಿಸಿದರು.



ರಾನಡೆಯಂಥವರು ಬೆಂಬಲಿಸಿದ ನೀತಿಗೆ ತಿಲಕರಂತಹವರು ವಿರೋಧಿಗಳಾದದ್ದು ಒಂದು ಅಪೂರ್ವ ದುರಂತವಾಯಿತು. ನಂತರ ತಿಲಕರು ಗೋ ಸಂರಕ್ಷಣಾ ಸಮಿತಿಯನ್ನೂ ರಚಿಸಿದರು. ಹೀಗೆ ಅವರ ರಾಜಕೀಯವು ಗೊಂದಲಗಳ ಕಗ್ಗಂಟಾಯಿತು.



ಇಷ್ಟೆಲ್ಲಾ ಇದ್ದರೂ ಆಗಿನ ವಸಾಹತು ವಿರೋಧಿ ಚಳುವಳಿಗೆ ಅತಿ ಹೆಚ್ಚಿನ ಶಕ್ತಿ ದೊರೆತದ್ದು ತಿಲಕರಿಂದ ಎಂಬುದನ್ನು ಮರೆಯಬಾರದು. ಸ್ವಾತಂತ್ರ್ಯದ ಕಹಳೆ ಮೊಳಗುತ್ತಿದ್ದುದು ಅವರ ಪತ್ರಿಕೆಯಾದ "ಕೇಸರಿ" ಮುಖಾಂತರ. ಜನರ ರಾಜಕೀಯ ಚಿಂತನೆಗೆ ತಿರುವು ಕೊಡಲು ಈ ಪತ್ರಿಕೆ ಸಮರ್ಥವಾದ ಮಾಧ್ಯಮವಾಗಿತ್ತು. ಅದೇ ಬ್ರಿಟಿಷ್ ಸರ್ಕಾರಕ್ಕೆ ಪೇಚಿನ ವಿಷಯ. ತಿಲಕರ ಮೇಲೆ ನಿರ್ಬಂಧಗಳನ್ನು ಹೇರುವುದು ಹೆಚ್ಚುತ್ತಾ ಬಂದು ಕಡೆಗೆ ವಸಾಹತು ಸರ್ಕಾರ 1908ರಲ್ಲಿ ಅವರನ್ನು ದಸ್ತಗಿರಿ ಮಾಡಿತು. ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಇದು ಮೊಟ್ಟ ಮೊದಲ ಅತ್ಯಂತ ಪ್ರಭಾವೀ ಘಟನೆಯೆಂದರೆ ತಪ್ಪಾಗಲಾರದು. ಏಕೆಂದರೆ, ತಿಲಕರ ಬಂಧನಕ್ಕೆ ಬಂದ ಸಾರ್ವಜನಿಕ ಪ್ರತಿಕ್ರಿಯೆ ಅಷ್ಟು ಅಮೋಘವಾಗಿತ್ತು. ಮುಂಬೈ ಗಿರಣಿಗಳಲ್ಲಿ ಹಾಗೂ ಇನ್ನಿತರ ಉದ್ದಿಮೆಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಯಾವ ಅಂಜಿಕೆಯೂ ಇಲ್ಲದೆ ಸ್ವಯಂ ಪ್ರೇರಣೆಯಿಂದ ಮುಷ್ಕರ ಹೂಡಿದರು. ಅದೂ ಸಹಸ್ರಾರು ಸಂಖ್ಯೆಯಲ್ಲಿ. ನೇರವಾಗಿ ಕಾರ್ಮಿಕರೊಡನೆ ಸಂಪರ್ಕ ಇಲ್ಲದಿದ್ದ ತಿಲಕರ ಬಂಧನಕ್ಕೆ ಬಂದ ಪ್ರತಿಕ್ರಿಯೆ ಬ್ರಿಟಿಷ್ ಸರ್ಕಾರವನ್ನು ತಲ್ಲಣಗೊಳಿಸಿತು. ಅಂದರೆ, ಕಾರ್ಮಿಕರ ರಾಜಕೀಯ ಪ್ರಜ್ಞೆ, ಸ್ವಾತಂತ್ರ್ಯ ಪ್ರಜ್ಞೆ, ಉನ್ನತ ಮಟ್ಟಕ್ಕೇರಿದ್ದುದರ ಸೂಚನೆ ಇದು. ಇಂತಹ ಕಾರ್ಯಾಚರಣೆ ಮುಂದುವರಿದರೆ ಬ್ರಿಟನ್ನಿನ ವಸಾಹತು ಸರ್ಕಾರ ಮುರಿದು ಬೀಳುವುದು ಖಚಿತವೆಂದು ಬಣ್ಣಿಸಿ ರಷ್ಯದ ಕ್ರಾಂತಿಕಾರಿ ನಾಯಕ ಲೆನಿನ್ ಮುಂಬೈನ ಕಾರ್ಮಿಕ ವರ್ಗವನ್ನು ಅಭಿನಂದಿಸಿದರು. ಆವರೆಗೆ ಮುಂಚೂಣಿಯಲ್ಲಿರದಿದ್ದ ಕಾರ್ಮಿಕ ವರ್ಗವನ್ನು ತಿಲಕರು ಸ್ವಾತಂತ್ರ್ಯ ಹೋರಾಟ ರಂಗಕ್ಕೆ ಇಳಿಸಿದ್ದರು. ಇದಾದ ನಂತರ ಆ ವರ್ಗವು ಹಿಮ್ಮೆಟ್ಟುವ ಸಾಧ್ಯತೆ

ಕಡಿಮೆಯೆಂದು ಬ್ರಿಟಿಷ್ ಸರ್ಕಾರಕ್ಕೆ ಆತಂಕ ಹೆಚ್ಚಿತ್ತು. ಅದೇ ಕಾರಣದಿಂದ ಬ್ರಿಟಿಷ್ ಸರ್ಕಾರವು ತಿಲಕರನ್ನು ದೂರದ ಬರ್ಮಾದ ಮ್ಯಾಂಡಲೆ ಸೆರೆಮನೆಗೆ ದಬ್ಬಿತು.

ಸ್ವಾತಂತ್ರ್ಯ ಚಳುವಳಿಗೆ 1905ರ ಇನ್ನೊಂದು ಘಟನೆಯೂ ಸ್ವಲ್ಪ ಪುಷ್ಟಿಯನ್ನು ನೀಡಿತ್ತು. ಕರ್ಜನ್ ವೈಸ್‌ರಾಯ್ ಆಗಿದ್ದಾಗ ಬಂಗಾಳವನ್ನು ಇಬ್ಭಾಗ ಮಾಡುವ ಯೋಜನೆ ಸಿದ್ಧಪಡಿಸಿದ್ದ. ಅವನ ನಂತರ ಬಂದವನು ಅದನ್ನು ಕಾರ್ಯಗತಗೊಳಿಸಿದ. ಅದು ಬಂಗಾಳದ ಜನತೆಯನ್ನು ಮಾತ್ರವಲ್ಲದೆ ಇಡೀ ಭಾರತದ ಜನರನ್ನು ರೊಚ್ಚಿಗೆಬ್ಬಿಸಿತು. ಆಂದೋಳನದ ಅಂಗವಾಗಿ ವಿದೇಶಿ ಸರಕುಗಳನ್ನು ಬಹಿಷ್ಕರಿಸುವ ಕಾರ್ಯಕ್ರಮವನ್ನು ರಾಷ್ಟ್ರೀಯ ನಾಯಕರು ಜಾರಿಗೊಳಿಸಿದರು. ಇದು ಆರಂಭವಾದದ್ದು ಆಗಸ್ಟ್ 1905ರಲ್ಲಿ. ಆ ವರ್ಷದ ಕಾಂಗ್ರೆಸ್ ಅಧಿವೇಶನವು ಈ ಕಾರ್ಯಕ್ರಮಕ್ಕೆ ಸಮ್ಮತಿ ನೀಡಿತ್ತು. ಆದರೆ ಅದು ಚುರುಕುಗೊಂಡಿದ್ದು 1906ರಲ್ಲಿ. ಆ ವರ್ಷ ಕಾಂಗ್ರೆಸ್ ಅಧಿವೇಶನವು ಕಲ್ಕತ್ತೆಯಲ್ಲಿ ನಡೆಯಿತು. ಆಗ್ಗೆ ತೀವ್ರಗಾಮಿಗಳು ಸ್ವಲ್ಪ ಮುನ್ನಡೆ ಸಾಧಿಸಿದ್ದು ಅಧಿವೇಶನದಲ್ಲಿ ಅವರ ಬಲ ಹೆಚ್ಚಾಗಿತ್ತು. ಇಲ್ಲಿ ಒಂದಂಶವನ್ನು ವಿಶೇಷವಾಗಿ ಗಮನಿಸಬೇಕಾಗಿದೆ. 1885-86ರಲ್ಲಿ ದಾದಾಭಾಯಿ ನವರೋಜಿಯವರು ಬ್ರಿಟಿಷ್ ಸರ್ಕಾರದ ಮನವೊಲಿಸಿ ಭಾರತದ ಅಭಿವೃದ್ಧಿಯನ್ನು ಸಾಧಿಸಬಹುದೆಂದು ಬಗೆದಿದ್ದರು; 1886ರ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಆ ಆಶಯವನ್ನು ಸಾರ್ವಜನಿಕವಾಗಿ ಪ್ರಕಟಿಸಿದ್ದರು ಕೂಡ. ಆದರೆ ಘಟನೆಗಳ ಒತ್ತಡದಿಂದ ಅವರ ಅನುಭವ ಹಾಗೂ ವ್ಯಕ್ತಿತ್ವ ವಿಕಸಿಸುತ್ತಾ ಹೋಗಿ ಕಡೆಗೆ 1906ರ ಅಧಿವೇಶನದಲ್ಲಿ ಅವರೇ ಸ್ವತಃ ಗೊತ್ತುವಳಿಯನ್ನು ಮಂಡಿಸಿದರು. ಹೋರಾಟಕ್ಕಿಳಿದ ವ್ಯಕ್ತಿಗೆ ಅನುಭವವೇ ಅತ್ಯುತ್ತಮ ಪಾಠವನ್ನು ಕಲಿಸುತ್ತದೆಂಬುದಕ್ಕೆ ಇದೊಂದು ನಿದರ್ಶನ. ಅವರೆಗೆ ಕಾಂಗ್ರೆಸ್‌ನಲ್ಲಿ ಅಂತಹ ಗೊತ್ತುವಳಿ ಎಂದೂ ಬಂದಿರಲಿಲ್ಲ. ಈಗ ಹಿರಿಯ ನಾಯಕ ನವರೋಜಿ ಅದನ್ನು ತಂದಿದ್ದರು. ಅದೊಂದು ಚರಿತ್ರಾರ್ಹ ನಿರ್ಣಯ: ಭಾರತಕ್ಕೆ ಸ್ವರಾಜ್ಯ ಅಥವಾ ಸ್ವಯಮಾಡಳಿತವೇ ಗುರಿಯೆಂದು ಆ ನಿರ್ಣಯ ಘೋಷಿಸಿತ್ತು. ಭಾರತದ ವಸಾಹತು ವಿರೋಧಿ ಹೋರಾಟದಲ್ಲಿ ಎರಡನೆಯ ಅಧ್ಯಾಯ ಇದರೊಂದಿಗೆ ಆರಂಭವಾಯಿತು. ಬ್ರಿಟನ್ನಿನಿಂದ ಸಂಪೂರ್ಣವಾಗಿ ಬೇರೆಯಾಗಬೇಕೆಂಬ ಆಶಯವನ್ನು ಈ ನಿರ್ಣಯ ಹೊತ್ತಿರಲಿಲ್ಲ. ಆ ದೇಶದ ಪರಿಧಿಯಲ್ಲಿದ್ದುಕೊಂಡೇ ಸ್ವಯಮಾಡಳಿತದ ಉದ್ದೇಶವನ್ನು ಅದು ಸಾಧಿಸಿತು. ಮುಂದುವರಿದು ನವರೋಜಿಯವರ ನಿರ್ಣಯವು ವಿದೇಶಿ ಸರಕುಗಳ ಬಗೆಗೂ ಒತ್ತುಕೊಟ್ಟಿತ್ತು. ನವರೋಜಿಯುವರ ದೂರದರ್ಶಿತ್ವಕ್ಕೆ ಈ ನಿರ್ಣಯವು ಒಂದು ನಿದರ್ಶನವಾಗಿದೆ. ಆಳವಾದ ವಿಶ್ಲೇಷಣೆಯಲ್ಲಿ ತೊಡಗಿದರೆ ಇಂದಿಗೂ ಅವರ ನಾಲ್ಕು ಸೂತ್ರಗಳು ಪ್ರಶಸ್ತವಾಗಿ ಕಾಣುತ್ತವೆ: ಸ್ವರಾಜ್ಯವೆಂದರೆ ಸ್ವಾವಲಂಬನೆಯೂ ಸೇರಬೇಕು; ಆದ್ದರಿಂದ ವಿದೇಶಿ ಮಾಲುಗಳನ್ನು ನೆಚ್ಚಿ ಕುಳಿತುಕೊಳ್ಳುವಂತಿಲ್ಲ. ನಮ್ಮದೇ ತಂತ್ರಜ್ಞಾನದ ಬೆಳೆವಣಿಗೆ ಮತ್ತು ಅಳವಡಿಸುವಿಕೆ ಅಗತ್ಯವಾಗುತ್ತದೆ. ಸ್ವತಂತ್ರ ಉತ್ಪಾದನೆಗಾಗಿ ನಮ್ಮ ಸ್ವಂತದ ಉದ್ಯಮವನ್ನು ವೃದ್ಧಿಪಡಿಸುವುದು ಅದಕ್ಕಿರುವ ಕಾರ್ಯವಿಧಾನ. ಇದನ್ನೆಲ್ಲಾ ಸಾಧಿಸಲು ನಮ್ಮ ಕೌಶಲ್ಯವನ್ನು ಹೆಚ್ಚಿಸಿಕೊಳ್ಳಬೇಕು, ಹೆಚ್ಚು ಜನರನ್ನು ತೊಡಗಿಸಿಕೊಳ್ಳಬೇಕು. ರಾಷ್ಟ್ರೀಯ ಶಿಕ್ಷಣವು ಅದಕ್ಕೆ ಅನುವು ಮಾಡಿಕೊಡುತ್ತದೆ. ಹೀಗೆ



ದಾದಾಭಾಯಿಯವರ ನಾಲ್ಕು ಸೂತ್ರಗಳು ಸ್ವರಾಜ್ಯ ಮತ್ತು ಸಾರ್ವಭೌಮತ್ವಕ್ಕೆ ಇಂದಿಗೂ ಮೂಲಾಧಾರವಾಗುತ್ತವೆ.

1906ರಲ್ಲಿ ನವಚೈತನ್ಯದಿಂದ ಮೂಡಿಬಂದ ಹೋರಾಟದ ಪ್ರಖರತೆಯು ಮುಂದಿನ ವರ್ಷ ಸೂರತ್‌ನಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದ ಘಟನೆಗಳಿಂದಾಗಿ ಸ್ವಲ್ಪ ಕುಗ್ಗಿತು. ವಿದೇಶಿ ಸರಕುಗಳ ಬಹಿಷ್ಕಾರದ ಬಗ್ಗೆ ಕಲ್ಕತ್ತೆಯ ಅಧಿವೇಶನವು ಸ್ವೀಕರಿಸಿದ್ದ ನಿರ್ಣಯಕ್ಕೆ ಸಾರ್ವಜನಿಕರ ನಡುವೆ ಎರಡು ವಿಧದ ಪ್ರತಿಕ್ರಿಯೆ ಕಂಡುಬಂದಿತ್ತು. ಅದರಲ್ಲಿ ಒಂದು ಅಭಿಪ್ರಾಯಕ್ಕೆ ರವೀಂದ್ರನಾಥ್ ಟಾಗೋರರ ಬೆಂಬಲವೂ ಇತ್ತು; ಅದೆಂದರೆ, ಇಂತಹ ಬಹಿಷ್ಕಾರವು ಸ್ವಾತಂತ್ರ್ಯ ಆಂದೋಲನದಲ್ಲಿ ಪ್ರಸ್ತುತವಲ್ಲವೆಂಬ ಅಭಿಪ್ರಾಯ. ವಿಪುಲವಾಗಿ ಬೆಳೆಯಬಹುದಾಗಿದ್ದ ಹೋರಾಟಕ್ಕೆ ಇದೊಂದು ಅಡ್ಡಿಯಾಯಿತು. ಅದು ಸಾಲದೆಂಬಂತೆ 1907ರ ಕಾಂಗ್ರೆಸ್ ಅಧಿವೇಶನವು ಇನ್ನೊಂದು ಬಿಕ್ಕಟ್ಟನ್ನು ಉಂಟುಮಾಡಿತು. ಮಿತವಾದಿಗಳು ಹಾಗೂ ತೀವ್ರವಾದಿಗಳು ಎಂಬ ಹಣೆಪಟ್ಟಿಯನ್ನು ಗೋಖಲೆ ಮತ್ತು ತಿಲಕರ ಸಮರ್ಥಕರು ಹೊತ್ತಿದ್ದರು. ಆ ಎರಡು ಬಣಗಳ ನಡುವಣ ಸಂಘರ್ಷವು ಸೂರತ್‌ನಲ್ಲಿ ವಿರಸದಲ್ಲಿ ಅಂತ್ಯವಾಯಿತು. ತಿಲಕರ ಬಣಕ್ಕೆ ಸಂಖ್ಯಾಬಲ ಮತ್ತು ಹೋರಾಟದ ನೆಲೆ, ಎರಡೂ ಹೆಚ್ಚಾಗಿದ್ದುವು. ಅದನ್ನು ವಾದದಿಂದ ಎದುರಿಸಲಾರದೆ ಹೋದ ಮಿತವಾದಿಗಳು ಕಾಂಗ್ರೆಸ್‌ನಿಂದ ಸಿಡಿದು ಬಂದು ಪ್ರತ್ಯೇಕವಾಗಿ ನಿಂತರು. ಮೋತಿಲಾಲ್ ನೆಹರುರಂತಹ ನಾಯಕರು ಕಾರ್ಯತಃ ಮಿತವಾದಿಗಳ ಧೋರಣೆಯನ್ನು ಪೂರ್ತಿಯಾಗಿ ಒಪ್ಪದಿದ್ದರೂ ತಿಲಕರ ಬಣದ ಕೆಲವು ಸಾಂಪ್ರದಾಯಿಕ ಆಚರಣೆ ಹಾಗೂ ನಂಬಿಕೆಗಳನ್ನು ಬೆಂಬಲಿಸಲು ಸಿದ್ಧರಿರಲಿಲ್ಲ. ಆದ್ದರಿಂದ ಅವರು ಮಿತವಾದಿಗಳೊಟ್ಟಿಗೆ ನಿಂತರು. 1916 ರವರೆಗೆ ಹೀಗೆ ಪ್ರತ್ಯೇಕವಾಗಿಯೇ ಉಳಿದಿದ್ದ ಬಣಗಳು ಆ ವರ್ಷದಲ್ಲಿ ಮತ್ತೆ ಒಂದಾದುವು ಮತ್ತು 1918ರಲ್ಲಿ ಕೆಲವು ಮಿತವಾದಿಗಳು ಕಾಂಗ್ರೆಸ್ಸನ್ನು ಬಿಟ್ಟು ಉದಾರೀ ಒಕ್ಕೂಟವೆಂಬ ಸಂಘಟನೆಯಲ್ಲದ ಸಂಘಟನೆಯನ್ನು ಕಟ್ಟಿಕೊಂಡರು. ಪಾಂಡಿತ್ಯ ಮತ್ತು ಉದಾರ ಭಾವನೆಗಳ ಹೆಸರಿನಲ್ಲಿ ಆ ಸಂಘಟನೆಯು ಬ್ರಿಟಿಷರ ವಿರೋಧವನ್ನು ಕಟ್ಟಿಕೊಳ್ಳದೆ ಸಂವಿಧಾನಾತ್ಮಕವಾಗಿ ಸ್ವಾತಂತ್ರ್ಯವನ್ನು ಪಡೆಯಲು ಬದ್ಧವಾಗಿದ್ದಿತೆಂದು ಹೇಳಲಾಗಿದೆ. ಸಂವಿಧಾನವೇ ಇಲ್ಲದ ಸನ್ನಿವೇಶದಲ್ಲಿ ಸಂವಿಧಾನಾತ್ಮಕ ಹೋರಾಟ ಅದಾಗಿತ್ತು!

ಒಟ್ಟನಲ್ಲಿ 1907 ಒಂದು ಪರ್ವಕಾಲವಾಯಿತು. ಸ್ವಾತಂತ್ರ್ಯ ಸಂಗ್ರಾಮದ ಎರಡನೆಯ ಅಧ್ಯಾಯ ಪ್ರಾರಂಭವಾಗುವ ಆ ವರ್ಷದ ಸಂದರ್ಭದಲ್ಲಿ ವಹಾಹತು ಸರ್ಕಾರವು ಹತ್ತಾರು ಜನವಿರೋಧಿ ಶಾಸನಗಳನ್ನು ತಂದಿತು. ಸಾರ್ವಜನಿಕ ಸಭೆಗಳನ್ನು ನಡೆಸಲು ಸಹ ದುಷ್ಕರವಾಗುವಂತೆ "ರಾಜದ್ರೋಹ ಸಭೆಗಳ ಶಾಸನ" ವೊಂದು ಅವುಗಳಲ್ಲಿ ಒಂದು. ಯಾವುದೇ ಸಭೆಯನ್ನು ಸರ್ಕಾರದ ಉಚ್ಚಾಟನೆಗಾಗಿ ನಡೆಸಲಾಗುತ್ತಿರುವ ಸಭೆಯೆಂದು ಘೋಷಿಸಿ ಅದನ್ನು ರದ್ದುಗೊಳಿಸುವ ಹಕ್ಕು ಸರ್ಕಾರದ್ದಾಯಿತು. ಪತ್ರಿಕಾ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಇನ್ನೊಂದು ಶಾಸನವೂ ಬಂತು. ತಿಲಕರನ್ನು 1908 ರಲ್ಲಿ ಬಂಧಿಸಿ ಆರು ವರ್ಷಗಳ ಕಾಲ ಮ್ಯಾಂಡಲೆ ಕಾರಾಗೃಹದಲ್ಲಿರಿಸಿದ್ದು ಈ ಹೊಸ ಶಾಸನದಡಿಯಲ್ಲಿ.



ಅವರು ಬರೆದಿದ್ದ ಲೇಖನ ಅದಕ್ಕೆ ಒಂದು ಸಬೂಬು, ಅಷ್ಟೇ ಹೋರಾಟದ ರಂಗದಿಂದ ಅವರನ್ನು ದೂರಮಾಡುವುದು ವಸಾಹುತ ಸರ್ಕಾರದ ಅಬಾಧಿತ ಅಸ್ತಿತ್ವಕ್ಕೆ ಅಗತ್ಯವಾಗಿತ್ತು. ಸಂಗ್ರಾಮದ ಚುರುಕನ್ನು ಹತ್ತಿಕ್ಕಲು ಬ್ರಿಟಿಷ್ ಸರ್ಕಾರಕ್ಕೆ ಇದಕ್ಕಿಂತಲೂ ಸುಲಭವಾದ ಕುತಂತ್ರ ಬೇರೊಂದಿರಲಿಲ್ಲ. ಅವರು ನಿರೀಕ್ಷಿಸಿದ್ದಂತೆ ತಿಲಕರ ನಿರ್ಗಮನದಿಂದ ಹೋರಾಟದ ಶಾಖವು ಸ್ವಲ್ಪ ಕ್ಷೀಣವಾಯಿತು. ಮೊದಲನೆಯ ಮಹಾಯುದ್ಧ ಆರಂಭವಾಗುವ ಕೆಲವೇ ದಿನಗಳ ಮುಂಚೆ ತಿಲಕರ ಬಿಡುಗಡೆಯಾಯಿತು ಮತ್ತು ಭಾರತದ ಬಿಡುಗಡೆಗಾಗಿ ಮುಂದಿನ ಹಂತದ ಹೋರಾಟಕ್ಕೆ ಜನತೆ ಮತ್ತೆ ಅಣಿನೆರೆಯಿತು.



# ಭಾರತೀಯ ರಾಷ್ಟ್ರೀಯ ಚಳುವಳಿಯ ವಿವಿಧ ಹಂತಗಳು

ಪ್ರೊ. ಜಿ.ಎಂ.ಶ್ರೀನಿವಾಸಯ್ಯ

ಭಾರತದ ರಾಷ್ಟ್ರೀಯಚಳುವಳಿ ಆಧುನಿಕ ಪ್ರಪಂಚದ ಇತಿಹಾಸದಲ್ಲಿಯೇ ಒಂದು ಅದ್ವಿತೀಯ ಹಾಗೂ ಅಸಮಾನ್ಯ ಸ್ವಾತಂತ್ರ್ಯ ಸಂಗ್ರಾಮ ಎಂಬ ಪ್ರಸಿದ್ದಿ ಪಡೆದಿದೆ. ಭಾರತೀಯರ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಅಧ್ಯಯನದ ಅನುಷ್ಟನಕ್ಕಾಗಿ ಮೂರು ಪ್ರಮುಖ ಹಂತಗಳನ್ನಾಗಿ ವಿಂಗಡಿಸಲಾಗಿದೆ. ಆಪ್ರಮುಖ ಘಟ್ಟಗಳೆಂದರೆ.

1. ಕ್ರಿ.ಶ. 1885 ರಿಂದ 1905 ವರೆಗಿನ ಕಾಲ
2. ಕ್ರಿ.ಶ. 1906 ರಿಂದ 1919 ರ ವರೆಗಿನ ಕಾಲ
3. ಕ್ರಿ.ಶ. 1920 ರಿಂದ 1947 ರ ವರೆಗಿನ ಕಾಲ.

ಕ್ರಿ.ಶ. 1885 ರಿಂದ 1905 ವರೆಗಿನ ಕಾಲವನ್ನು ಸಾಮಾನ್ಯವಾಗಿ ಮಂದಗಾಮಿ ರಾಷ್ಟ್ರೀಯತೆಯ ಕಾಲವೆಂದು ಕರೆಯಲಾಗಿದೆ.

ಈ ಹಂತದಲ್ಲಿ ಭಾರತೀಯ ರಾಷ್ಟನಾಯಕರು ಸೌಮ್ಯವಾದಿಗಳಾಗಿದ್ದು, ನಿಧಾನದ ನೀತಿ ಅನುಸರಿಸಿ, ಬ್ರಿಟಿಷ್ ಸರ್ಕಾರದ ಮುಂದೆ ಮಿತವಾದ ಬೇಡಿಕೆಗಳನ್ನು ಇಟ್ಟು, ಅವುಗಳನ್ನು ಪಡೆದುಕೊಳ್ಳುವ ಪ್ರಯತ್ನ ಮಾಡಿದರು. ಕ್ರಿ.ಶ. 1906 ರಿಂದ 1919 ರ ವರೆಗಿನ ಅವಧಿಯಲ್ಲಿ ಕಾಂಗ್ರೇಸ್ ಸಂಸ್ಥೆಯಲ್ಲಿ ತೀವ್ರಗಾಮಿಗಳ ಪ್ರಭಾವ ಹೆಚ್ಚಾಗಿ, ಉಗ್ರನೀತಿ ಕ್ರಮಗಳನ್ನು ಅನುಸರಿಸಿ ತಮ್ಮ ರಾಷ್ಟ್ರೀಯ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹೆಚ್ಚಿನ ಒತ್ತಡವನ್ನು ಬ್ರಿಟಿಷ್ ಸರ್ಕಾರದ ಮೇಲೆ ಹಾಕಿದರು.

ಈ ಹಂತದಲ್ಲಿ ಕಾಂಗ್ರೆಸ್ ಸಂಸ್ಥೆ ತೀವ್ರಗಾಮಿ ಸಂಸ್ಥೆಯಾಗಿ ಬೆಳೆಯಿತು. ಕ್ರಿ.ಶ. 1920 ರಿಂದ 1947 ರ ವರೆಗಿನ ಕಾಲ ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಗಾಂಧಿಯುಗ ಎಂದು ಪ್ರಸಿದ್ಧಿ ಪಡೆಯಿತು. ಈ ಅವಧಿಯಲ್ಲಿ ಗಾಂಧಿಜೀಯವರ ನಾಯಕತ್ವದಲ್ಲಿ ಭಾರತದ ಜನತೆ ಐಕ್ಯಭಾವನೆಯಿಂದ ಸ್ವಾತಂತ್ರಗಳಿಸಲು ನಿರಂತರ ಹೋರಾಟ ನಡೆಸಿತು. ಇದನ್ನು ಒಂದು ವಿಶಿಷ್ಠ ಜನಾಂದೋಳನ ಹೋರಾಟವನ್ನಾಗಿ ಪರಿವರ್ತಿಸಿದ ಕೀರ್ತಿ ಗಾಂಧೀಜಿಯವರಿಗೆ ಸಲ್ಲಬೇಕು.

ಈಗ ಮಂದಗಾಮಿಗಳ ಅಥವಾ ಸೌಮ್ಯವಾದಿಗಳು ಹಾಗೂ ತೀವ್ರಗಾಮಿಗಳು ಅಥವಾ ಉಗ್ರವಾದಿಗಳು ಅನುಸರಿಸಿದ ನೀತಿ ಮತ್ತು ಅವರಿಬ್ಬರಿಗೂ ಇದ್ದ ಮೂಲಭೂತ ಭಿನ್ನಾಭಿಪ್ರಾಯಗಳನ್ನು



ವಿಶ್ಲೇಷಿಸುವುದು ಸೂಕ್ತ. ಮಂದಗಾಮಿಗಳ ಹಾಗೂ ತೀವ್ರಗಾಮಿಗಳು ಇಬ್ಬರೂ ಭಾರತ ಸ್ವಾತಂತ್ರ್ಯ ಪಡೆಯುವಲ್ಲಿ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ್ದಾರೆಂಬುದನ್ನು ನಾವು ತಿಳಿಯಬೇಕು. ಇಬ್ಬರ ಮಾರ್ಗಗಳು ಬೇರೆ ಬೇರೆಯಾಗಿದ್ದರೂ, ಅವರ ಗುರಿ ಒಂದೇ ಆಗಿತ್ತು. ಭಾರತವನ್ನು ಬ್ರಿಟೀಷ್ ಪ್ರಭುತ್ವದಿಂದ ವಿಮೋಚನೆಗೊಳಿಸುವುದು.

ಭಾರತದ ರಾಷ್ಟ್ರೀಯ ಚಳುವಳಿಯ ಮೊದಲ ಹಂತದಲ್ಲಿ ಮಂದಗಾಮಿಗಳೇ ಪ್ರಬಲವಾಗಿದ್ದು, ಅವರೆಲ್ಲರೂ ಕಟ್ಟ ರಾಷ್ಟ್ರವಾದಿಗಳಾಗಿದ್ದರು. ಆಗಿನ ಮಂದಗಾಮಿಗಳ ಪ್ರಭಾವಿ ನಾಯಕರುಗಳೆಂದರೆ ದಾದಾಬಾಯಿನವರೋಜಿ, ಗೋಪಾಲಕೃಷ್ಣಗೋಖಲೆ, ಸುರೇಂದ್ರನಾಥಬ್ಯಾನರ್ಜಿ, ಫಿರೋಜ್‌ಷಾಮೆಹ್ತ, ಲಾಲ್‌ಮೋಹನ್‌ಘೋಷ್, ಆನಂದಚಾರ್ಲು ಮುಂತಾದವರು. ಇವರೆಲ್ಲರೂ ಕಾಂಗ್ರೆಸ್ ಸಂಸ್ಥೆಗೆ ಹೊಸ ಜೀವ, ಚೈತನ್ಯ ತುಂಬಿದ ನಾಯಕರಾಗಿದ್ದರು. ಆದರೆ ಅವರುಗಳು ಕ್ರಾಂತಿಕಾರರ ಮಾರ್ಗ, ಕಾರ್ಯಕ್ರಮಗಳಲ್ಲಿ ವಿಶ್ವಾಸ ಹೊಂದಿರಲಿಲ್ಲ. ಬ್ರಿಟಿಷ್ ಪ್ರಭುತ್ವದಲ್ಲಿ ನಿಷ್ಠೆ, ವಿಶ್ವಾಸವಿಟ್ಟಿದ್ದ ಅವರ ಬೇಡಿಕೆಗಳೂ ಸಹ ತುಂಬಾ ಮಿತವಾಗಿದ್ದವು. ಬ್ರಿಟೀಷರ ನ್ಯಾಯಪರತೆ, ಆಳ್ವಿಕೆ, ಧರ್ಮಗಳಲ್ಲಿ ಅಚಲವಾದ ವಿಶ್ವಾಸ ಹೊಂದಿದ್ದರು. ಭಾರತೀಯರು ತಮ್ಮನ್ನು ತಾವೇ ಆಳಿಕೊಳ್ಳುವ ಅರ್ಹತೆ ಹೊಂದಿದಾರೆ ಎಂಬುದು ಬ್ರಿಟೀಷರಿಗೆ ಮನವರಿಕೆ ಆದ ಕೊಡಲೇ ಭಾರತೀಯರಿಗೆ ಸ್ವಾತಂತ್ರ್ಯ ನೀಡಲು ಹಿಂಜರಿಯುವುದಿಲ್ಲವೆಂಬುದು ಮಂದಗಾಮಿಗಳ ನಂಬಿಕೆಯಾಗಿತ್ತು. ಆದ್ದರಿಂದ ಬ್ರಿಟೀಷರ ದ್ವೇಷ ಕಟ್ಟಿಕೊಳ್ಳುವುದಕ್ಕೆ ಬದಲಾಗಿ, ಮಂದಗಾಮಿಗಳು ಅವರ ಹಿತೈಷಿಗಳಾಗಿದ್ದರು.

ಮಂದಗಾಮಿಗಳು ಕಾನೂನು ಬದ್ದವಾಗಿ, ರಾಜ್ಯಾಂಗಬದ್ದವಾದ ಕ್ರಮಗಳನ್ನು ಅನುಸರಿಸುವುದರ ಮೂಲಕ ತಮ್ಮೆಲ್ಲ ಬೇಡಿಕೆಗಳ ಬಗ್ಗೆ ಅರಿವುಂಟು ಮಾಡುವುದು, ರಾಷ್ಟ್ರೀಯ ರಾಜಕೀಯ ಪ್ರಜ್ಞೆ ಮೂಡಿಸುವುದು, ರಾಷ್ಟ್ರದ ರಾಜಕೀಯ ಸಮಸ್ಯೆಗಳ ಬಗ್ಗೆ ಸಾರ್ವಜನಿಕರಲ್ಲಿ ಒಮ್ಮತಾಭಿಪ್ರಾಯ ಮೂಡಿಸುವುದು ಮಂದಗಾಮಿಗಳ ಗುರಿಯಾಗಿತ್ತು. ಮಂದಗಾಮಿಗಳಿಗೆ ಉಗ್ರವಾದ ಕಾರ್ಯಕ್ರಮ ಹಮ್ಮಿಕ್ಕೊಳ್ಳುವುದರಲ್ಲಿ ಎಳ್ಳಷ್ಟೂ ನಂಬಿಕೆಯಿರಲಿಲ್ಲ. ಆದ್ದರಿಂದ ಬ್ರಿಟೀಷರಿಗೆ ಮನವಿಗಳನ್ನು ಸಲ್ಲಿಸುವುದು, ಸಾರ್ವಜನಿಕ ಚರ್ಚೆಗಳನ್ನು ಏರ್ಪಡಿಸುವುದು, ಶಾಂತಿಯುತ ಪ್ರದರ್ಶನಗಳನ್ನು ಸಂಘಟಿಸುವುದು, ಬಿನ್ನವತ್ತಳೆಗಳನ್ನು ಸಲ್ಲಿಸುವುದು, ನಿಯೋಗಗಳನ್ನು ಕಳುಹಿಸುವುದು ಇವು ಮಂದಗಾಮಿಗಳ ವಿಧಾನಗಳು, ಕಾರ್ಯಕ್ರಮಗಳಾಗಿದ್ದವು. ಬ್ರಿಟೀಷರ ಒಳ್ಳೆಯತನದಲ್ಲಿ ನಂಬಿಕೆ ಇಟ್ಟಿದ್ದ ಮಂದಗಾಮಿಗಳು, ನಿಧಾನವಾಗಿ ಬ್ರಿಟಿಷ್ ಪ್ರಭುತ್ವದ ಸಹಕಾರ ಸ್ನೇಹದಿಂದ ತಮ್ಮ ಬೇಡಿಕೆಗಳನ್ನು ಈಡೇರಿಸಿ ಕೊಳ್ಳುವ ಉದ್ದೇಶ ಹೊಂದಿದ್ದರು.

ಮಂದಗಾಮಿಗಳು ಸರ್ಕಾರದೊಂದಿಗೆ ಮಧುರ ಬಾಂಧವ್ಯ ಹೊಂದಿದ್ದು, ಬ್ರಿಟೀಷರಲ್ಲಿ ತಮ್ಮ ರಾಜನಿಷ್ಠೆ ವ್ಯಕ್ತಪಡಿಸಿದರು. ಭಾರತೀಯರ ಬಡತನ, ಹಿಂದುಳಿವಿಕೆಗೆ ಬ್ರಿಟೀಷರ ನೀತಿ ನಿಯಮಗಳೇ ಕಾರಣವೆಂದು ಮಂದಗಾಮಿಗಳು ಹೇಳಿದರು. ಭಾರತದ ದೇಶಿಯ ಕೈಗಾರಿಕೆಗಳ ನಾಶಕ್ಕೆ ಬ್ರಿಟೀಷರೇ ಕಾರಣವೆಂದು ದೂಷಿಸಿದರು. ಆಧುನಿಕ ಕೈಗಾರಿಕೆಗೆ ತ್ವರಿತ ಗಮನ ನೀಡಿ, ಭಾರತೀಯರ ಬಡತನವನ್ನು,





ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸುವಂತೆ ಬ್ರಿಟೀಷ್ ಸರ್ಕಾರವನ್ನು ಕೇಳಿಕೊಂಡರು.

ಆಡಳಿತದಲ್ಲಿ ಭಾರತೀಯರಿಗೆ ಹೆಚ್ಚಿನ ಆದ್ಯತೆ ನೀಡಬೇಕು, ಆಡಳಿತ ವ್ಯವಸ್ಥೆಯ ವೆಚ್ಚವನ್ನು ತಗ್ಗಿಸಬೇಕು, ಕೃಷಿ ಬ್ಯಾಂಕುಗಳ ಮೂಲಕ ರೈತರಿಗೆ ಸುಲಭ ಸಾಲ ನೀಡಬೇಕು, ನೀರಾವರಿ ಸೌಲಭ್ಯಗಳನ್ನು ಒದಗಿಸಬೇಕು, ಸೈನಿಕ ವೆಚ್ಚವನ್ನು ಕಡಿಮೆ ಮಾಡಬೇಕು, ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ, ರಕ್ಷಣೆ ನೀಡಬೇಕು, ಭಾರತದ ಸಂಪನ್ಮೂಲಗಳು ಇಂಗ್ಲೆಂಡಿಗೆ ಹರಿಯುವುದನ್ನು ತಡೆಯಬೇಕು, ಜನಸಾಮಾನ್ಯರಿಗೆ ಹೊರೆಯಾಗಿರುವ ತೆರಿಗೆಗಳನ್ನು, ವಿಶೇಷವಾಗಿ ಉಪ್ಪಿನ ಮೇಲಿನ ತೆರಿಗೆಯನ್ನು ಕಡಿಮೆಮಾಡಬೇಕು, ಭಾರತೀಯರಿಗೆ ಪ್ರಗತಿಪರ ಶಿಕ್ಷಣ ನೀಡಿ, ಅವರಿಗೆ ಸಿವಿಲ್ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನು ನೀಡುವುದು, ಇವು ಮಂದಗಾಮಿಗಳ ಸಾಮಾನ್ಯ ಬೇಡಿಕೆಗಳಾಗಿದ್ದುವು.

ಮಂದಗಾಮಿ ಕಾಂಗ್ರೆಸ್ಸಿಗರ ಮಿತ ಬೇಡಿಕೆಗಳು, ಸೌಮ್ಯಸ್ವರೂಪದ ಮನವಿಪತ್ರಗಳು, ಪರಿಣಾಮ ಕಾರಿಯಲ್ಲದ ಪ್ರತಿಭಟನೆಗಳು, ಪ್ರದರ್ಶನಗಳು ಬ್ರಿಟಿಷ್ ಸರ್ಕಾರದ ಮೇಲೆ ಯಾವ ಪರಿಣಾಮ ಬೀರಲಿಲ್ಲ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಸ್ಥಾಪನೆಯಾದಂದಿನಿಂದಲೂ, ಬ್ರಿಟಿಷ್ ಆಳರಸರು ಭಾರತೀಯರ ಬೇಡಿಕೆಗಳನ್ನು ನಿಕೃಷ್ಟ ಮನೋಭಾವದಿಂದ ನಿರಾಕರಿಸುತ್ತಲೇ ಬಂದಿತು. ಕಾಂಗ್ರೇಸ್ ಚಟುವಟಿಕೆಗಳನ್ನು ಅನುಮಾನದಿಂದ ಕಂಡು, ಖಂಡಿಸಿತು. ಬ್ರಿಟಿಶ್ ಸರ್ಕಾರ ರಾಷ್ಟ್ರೀಯ ಚಳವಳಿಯನ್ನು ನಿಷ್ಕ್ರಿಯಗೊಳಿಸಲು ಬ್ರಿಟೀಷ್ ಪ್ರಭುಗಳು ಒಡೆದು ಆಳುವ ನೀತಿ ಅನುಸರಿಸಿದರು. ಕಾಂಗ್ರೇಸ್ ವಿರೋಧಿ ಚಳವಳಿ ಆರಂಭಿಸುವಂತೆ ಬ್ರಿಟೀಷ ಪರವಾಗಿದ್ದ ಸರ್ ಸಯ್ಯದ್ ಅಹಮದ್ ಖಾನ್, ರಾಜ ಶಿವಪ್ರಸಾದ್ ಮುಂತಾದ ಭಾರತೀಯರಿಗೆ ಪ್ರೋತ್ಸಾಹ ನೀಡಿದರು. ಹಿಂದೂ-ಮುಸ್ಲಿಮರನ್ನು ಒಬ್ಬರ ಮೇಲೆ ಇನ್ನೊಬ್ಬರನ್ನು ಎತ್ತಿಕಟ್ಟಿದರು. ಸರ್ಕಾರದ ಸೇವೆಗೆ ಸಂಬಂಧಿಸಿದಂತೆ ವಿದ್ಯಾವಂತ ಭಾರತೀಯರಲ್ಲಿ ಜಾತಿ ವೈಷಮ್ಯ ಬೇಧ ಭಾವ ಬೆಳೆಯುವಂತೆ ನೋಡಿಕೊಂಡರು.

**ತೀವ್ರ ಅಥವಾ ಉಗ್ರಗಾಮಿಗಳ ಏಳಿಗೆ:**

ಮಂದಗಾಮಿ ಕಾಂಗ್ರೇಸಿಗರ ದೌರ್ಬಲ್ಯ, ಸೋಲು ಮತ್ತು ಭಾರತೀಯರ ಬೇಡಿಕೆಗಳ ಬಗ್ಗೆ ಬ್ರಿಟೀಷ್ ಪ್ರಬುಗಳ ನಿರಾಸಕ್ತಿ, ನಿರ್ಲಕ್ಷ್ಯ ಭಾವನೆಗಳಿಂದಾಗಿ ಕ್ರಮೇಣ ಕಾಂಗ್ರೇಸ್ ಸಂಸ್ಥೆಯಲ್ಲಿ ನಿರಾಸೆಯ ಕಾರ್ಮೋಡಗಳು ದಟ್ಟವಾದವು. ಬ್ರಿಟಿಷ್ ಸರ್ಕಾರದ ವಿರುದ್ದ ಭಾರತೀಯರಲ್ಲಿ ತೀವ್ರ ರೀತಿಯ ವಿರೋಧ ಭಾವನೆ ಬೆಳೆಯಲು ಸಾಧ್ಯವಾಯಿತು. ಕಾಂಗ್ರೇಸ್ ಸಂಸ್ಥೆಯಲ್ಲಿನ ಒಂದು ಗುಂಪು, ಕಾಂಗ್ರೇಸ್ ಚಳವಳಿಯಲ್ಲಿಯೇ ತನ್ನ ವಿಶ್ವಾಸ ಕಳೆದುಕೊಂಡಿತು. ಪ್ರತಿ ವರ್ಷವೂ ಮಂದಗಾಮಿ ಕಾಂಗ್ರೇಸಿಗರು ತಮ್ಮ ನಮ್ರ ಬೇಡಿಕೆಗಳನ್ನು ಕಳುಹಿಸುವುದನ್ನು ಮತ್ತು ಸರ್ಕಾರವು ಅವುಗಳನ್ನು ನಿರ್ದಾಕ್ಷಿಣ್ಯವಾಗಿ ಕಡೆಗಣಿಸುವುದನ್ನು, ಕಾಂಗ್ರೇಸಿನಲ್ಲಿ ತಲೆ ಎತ್ತಿದ ಹೊಸ ತೀವ್ರಗಾಮಿ ಗುಂಪು ಅಪಹಾಸ್ಯ ಮಾಡಿತು. ಈ ಗುಂಪು, ಮಂದಗಾಮಿಗಳ ವಿಧಾನಗಳನ್ನು, ಮನವಿಗಳನ್ನು ರಾಜಕೀಯ ಭಿಕ್ಷಾಟನೆ ಎಂದು ಅಪಹಾಸ್ಯ ಮಾಡಿತು. ಕೇವಲ ನಮ್ರ ಮನವಿ ಪತ್ರಗಳನ್ನು ಸಲ್ಲಿಸುವುದರಿಂದ ಬ್ರಿಟೀಷರನ್ನು ಬೇಡುವುದರಿಂದ, ಬ್ರಿಟೀಷ್ ಆಳರಸರೊಡನೆ, ಅಧಿಕಾರಿಗಳೊಡನೆ ಶಾಂತಿಯುತ



ಸಮಾಲೋಚನೆ ನಡೆಸುವುದರಿಂದಾಗಲಿ ರಾಜ್ಯಾಂಗ ಬದ್ಧವಾಗಿ, ಕಾನೂನು ಬದ್ಧವಾಗಿ ಕ್ರಮಗಳನ್ನು ತೆಗೆದುಕೊಳ್ಳುವುದರಿಂದ, ದೇಶದಲ್ಲಿ ಯಾವ ಸುಧಾರಣೆಯೂ ಆಗುವುದಿಲ್ಲವೆಂದು ತೀವ್ರಗಾಮಿ ಗುಂಪಿನ ನಾಯಕರಿಗೆ ಮನದಟ್ಟಾಯಿತು. ಬ್ರಿಟೀಷರನ್ನು ಬಗ್ಗು ಬಡಿಯಬೇಕಾದರೆ ಪ್ರಬಲವಾದ, ವ್ಯಾಪಕವಾದ ಉಗ್ರರೀತಿಯ ನೇರ ಚಳವಳಿಯೊಂದೇ ಮಾರ್ಗವೆಂದು ಈ ಗುಂಪಿನ ನಾಯಕರು ನಂಬಿದರು. ತೀವ್ರಗಾಮಿ ಗುಂಪಿನ ಪ್ರಮುಖ ನಾಯಕರುಗಳೆಂದರೆ ಬಾಲಗಂಗಾಧರ ತಿಲಕರು, ಲಾಲಾ ಲಜಪತರಾಯ್ ಮತ್ತು ಬಿಪಿನ್ ಚಂದ್ರ ಪಾಲ್ ಇವರುಗಳು. ಇವರು ಬಾಲ್ ಲಾಲ್ ಪಾಲ್ ತ್ರಿಮೂರ್ತಿಗಳೆಂದೇ ಪ್ರಖ್ಯಾತಿಯಾದರು.

ಕಾಂಗ್ರೆಸ್ಸಿನ ನೀತಿ ಕಾರ್ಯಕ್ರಮಗಳಲ್ಲಿ 1906ರ ನಂತರ ಬದಲಾವಣೆ ಅನಿವಾರ್ಯವಾಯಿತು. ಕಾಂಗ್ರೆಸ್ಸಿನಲ್ಲಿ ತೀವ್ರಗಾಮಿಗಳು ತಲೆ ಎತ್ತಲು ಅನೇಕ ಬೆಳವಣಿಗೆಗಳು, ಘಟನೆಗಳು ಕಾರಣವಾದವು.

1. ಬ್ರಿಟೀಷ್ ಆಳ್ವಿಕೆ ಭಾರತದಲ್ಲಿ ಮುಂದುವರೆಯುವ ಬಗ್ಗೆ ಮಂದಗಾಮಿಗಳು ಮತ್ತು ಉಗ್ರಗಾಮಿಗಳಲ್ಲಿ ಮೂಲಭೂತವಾದ ಭಿನ್ನಾಭಿಪ್ರಾಯಗಳಿದ್ದುವು. ಮಂದಗಾಮಿಗಳು ಬ್ರಿಟೀಷ್ ಪ್ರಭುಗಳಲ್ಲಿ ನಿಷ್ಠೆ, ಪೂಜ್ಯ ಭಾವನೆ ಹೊಂದಿದ್ದು ಭಾರತೀಯರ ಹಿತದೃಷ್ಠಿಯಿಂದ ಬ್ರಿಟೀಷರ ಆಳ್ವಿಕೆ ಮುಂದುವರೆಯುವುದು ಎಲ್ಲ ರೀತಿಯಲ್ಲಿಯೂ ಒಳ್ಳೆಯದೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ತೀವ್ರಗಾಮಿಗಳು ಇದಕ್ಕೆ ತದ್ವಿರುದ್ಧವಾದ ಅಭಿಪ್ರಾಯ ಹೊಂದಿದ್ದರು. ಬ್ರೀಟಿಷ್ ಪ್ರಭುತ್ವಕ್ಕೆ ನಿಷ್ಠೆಯಿಂದಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಮತ್ತು ಭಾರತದಲ್ಲಿ ಬ್ರಿಟೀಷ್ ಆಳ್ವಿಕೆ ಮುಂದುವರೆಯುವುದು ಒಂದು ದೊಡ್ಡ ಶಾಪ ಎಂದು ಗುಡುಗಿದರು. ಮಂದಗಾಮಿಗಳು, ಭಾರತೀಯರು ತಮ್ಮನ್ನು ತಾವೇ ಆಳಿಕೊಳ್ಳುವ ಸಾಮರ್ಥ್ಯ ಇನ್ನು ಪಡೆದಿಲ್ಲ, ಅದಕ್ಕೆ ಕಾಲವೂ ಸಹ ಪಕ್ವವಾಗಿಲ್ಲವೆಂದು ಹೇಳಿದರೆ, ಭಾರತೀಯರು ತಮ್ಮನ್ನು ತಾವು ಆಳಿಕೊಳ್ಳುವ ಬುದ್ದಿವಂತಿಕೆ, ಸಾಮರ್ಥ್ಯ ಹೊಂದಿದ್ದು, ಅದಕ್ಕೆ ಕಾಲ ಅತ್ಯಂತ ಸೂಕ್ತವಾಗಿದೆಯೆಂದು ತೀವ್ರಗಾಮಿಗಳು ನಂಬಿದ್ದರು. ಕಾಂಗ್ರೆಸ್ ತನ್ನ ಮೊದಲ ಇಪ್ಪತ್ತು ವರ್ಷಗಳ ಅವಧಿಯಲ್ಲಿ ನಿಷೇದಾತ್ಮಕ ಸಾಧನೆ ಹೊಂದಿದ್ದು ಅದು ಹೆಚ್ಚು ಏನನ್ನು ಸಾಧಿಸದೆ ಹೋದದ್ದು ತೀವ್ರಗಾಮಿಗಳಿಗೆ ದೃಢವಾದ ಹಾಗೂ ಧೈರ್ಯದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಅಗತ್ಯವಾಗಿದ್ದ ಹೊಸ ಉತ್ಸಾಹ, ಶಕ್ತಿ, ಚೈತನ್ಯಗಳನ್ನು ನೀಡಿತು.

2. ಭಾರತೀಯರ ನಿಜವಾದ ಬೇಡಿಕೆಗಳ ಬಗ್ಗೆ ಬ್ರಿಟೀಷ್ ಸರ್ಕಾರ ನಿರ್ಲಕ್ಷ್ಯ ಮನೋಭಾವನೆಯನ್ನು ತಾಳಿತ್ತು. ಬ್ರಿಟೀಷ್ ಸರ್ಕಾರ ತಾಳಿದ್ದ ನಿಲುವುನಿಂದ ಕಾಂಗ್ರೆಸ್‌ನಲ್ಲಿ ಆಗ ತಾನೇ ಬೆಳೆಯುತ್ತಿದ್ದ ತೀವ್ರಗಾಮಿಗಳು ಮತ್ತಷ್ಟು ಕೆರಳಿದರು. ರಾಜಕೀಯ ಹಕ್ಕುಗಳನ್ನು ದೃಢವಾದ ಹೋರಾಟದಿಂದ ಮಾತ್ರ ಗಳಿಸುವುದು ಸಾಧ್ಯವೆಂದು ತಿಲಕರು ಘೋಷಿಸಿದ್ದರು. ಕ್ರಿ.ಶ. 1896 ಮತ್ತು 1909 ರಲ್ಲಿ ಭಾರತದ ವಿವಿದ ಭಾಗಗಳಲ್ಲಿ ಉಂಟಾದ ಕ್ಷಾಮದಿಂದ ಲಕ್ಷಾಂತರ ಭಾರತೀಯರು ಅಪಾರ ಸಾವು ನೋವುಗಳನ್ನು ಅನುಭವುಸಿದರು. ಬಾಂಬೆ(ಮುಂಬೈ) ಪ್ರಾಂತ್ಯದಲ್ಲಿ ತಲೆದೋರಿದ ಪ್ಲೇಗ್ ರೋಗದಿಂದಾಗಿ ಅತೀವ ಸಂಕಷ್ಟಗಳನ್ನು ಅನುಭವಿಸಿದರು. ಪ್ಲೇಗ್ ರೋಗ, ಭಾರತದ ಇತರ ಭಾಗಗಳಿಗೂ ಹಬ್ಬಿ



ಜನರಲ್ಲಿ ಆಹಾಕಾರ ಉಂಟಾಯಿತು. ಈ ರೀತಿಯ ವಿಪತ್ತುಗಳನ್ನು ತಡೆಯಲು ಸರ್ಕಾರ ಸರಿಯಾದ ಕ್ರಮಗಳನ್ನು ತೆಗೆದುಕೊಳ್ಳಲಿಲ್ಲ. ಸರ್ಕಾರದ ಕ್ರಮಗಳು ದ್ವೇಷದಿಂದ ಕೂಡಿದ್ದು, ತುಂಬಾ ಅಸಮರ್ಪಕವಾಗಿದ್ದವು. ಭಾರತೀಯರು ಇಂತಹ ಧಾರುಣ ಪರಿಸ್ಥಿತಿ ಎದುರಿಸುತ್ತಿದ್ದ ಸಮಯದಲ್ಲಿಯೇ, ಸರ್ಕಾರವು ವಿಕ್ಟೋರಿಯಾ ಮಹಾರಾಣಿಯವರ ಅರವತ್ತು ವರ್ಷಗಳ ಆಳ್ವಿಕೆಯ ಸುವರ್ಣ ಮಹೋತ್ಸವ ನಡೆಸಲು ಅಪಾರ ಹಣ ವೆಚ್ಚ ಮಾಡುತ್ತಿತ್ತು. ಸೂಕ್ತ ಪರಿಹಾರ ಕ್ರಮಗಳಿಗೆ ಉಪಯೋಗಿಸಬೇಕಾಗಿದ್ದ ಹಣವನ್ನು ಮೋಜು ಮಾಡುವುದಕ್ಕೆ ಬಳಸಿದ್ದನ್ನು ಕಂಡು ತೀವ್ರಗಾಮಿಗಳು ಸರ್ಕಾರದ ವಿರುದ್ಧ ಕೆಂಡಕಾರಿದ್ದು ಸಹಜವಾಗಿತ್ತು. ಬಾಲಗಂಗಾಧರ ತಿಲಕರು ತಮ್ಮ ಕೇಸರಿ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಸರ್ಕಾರದ ಅಸಮರ್ಪಕ ನೀತಿ, ಉದಾಸೀನ ಮನೋಭಾವನೆಯನ್ನು ಉಗ್ರವಾಗಿ ಖಂಡಿಸಿದರು. ಉಗ್ರಗಾಮಿ ನಾಯಕರ ಪ್ರಚೋದನಕಾರಿ ಲೇಖನಗಳು, ಘೋರ ಕ್ಷಾಮ ಹಾಗೂ ಪ್ಲೇಗ್ ರೋಗದಿಂದಾಗಿ ಜನರು ಅನುಭವಿಸಿದ ಸಂಕಷ್ಟಗಳು ಭಾರತೀಯರ ಭಾವನೆಯನ್ನು ಕೆರಳಿಸಿದವು. ದೇಶದ ಅನೇಕ ಕಡೆಗಳಲ್ಲಿ ಗಲಭೆ ದಂಗೆಗಳು ನಡೆದವು. ಭಾರತೀಯರ ಕೋಪ ಎಷ್ಟಿತ್ತೆಂದರೆ ಪ್ಲೇಗ್ ರೋಗ ನಿಯಂತ್ರಿಸಲು ನೇಮಕವಾಗಿದ್ದ ಪ್ಲೇಗ್ ಕಮೀಷನರ್ ಮತ್ತು ಅವನ ಗೆಳೆಯರನ್ನು ಕೊಂದುಹಾಕಿದರು. ಸರ್ಕಾರ ಎಂದಿನಂತೆ ತನ್ನ ದಮನಕಾರಿ ನೀತಿಯ ಮೂಲಕ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸಿತು.

3. ಭಾರತೀಯರಲ್ಲಿ ಬ್ರಿಟೀಷರ ಬಗ್ಗೆ ಸೇಡಿನ ಭಾವನೆ ಬೆಳೆಯಲು ಇದ್ದ ಮತ್ತೊಂದು ಕಾರಣವೆಂದರೆ ಹಿಂದೂ ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಬಗ್ಗೆ ಜನರಲ್ಲಿ ಉಂಟಾದ ಅಭಿಮಾನ, ಗೌರವಗಳು ರಾಜರಾಮ ಮೋಹನ್ ರಾಯ್, ಸ್ವಾಮಿ ದಯಾನಂದ ಸರಸ್ವತಿ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮುಂತಾದ ಮಹನೀಯರ ಶ್ರಮದಿಂದ ಉಂಟಾದ ಸಾಮಾಜಿಕ, ಸಾಂಸ್ಕೃತಿಕ ಪುನರುಜ್ಜೀವನ, ಮಹಾರಾಷ್ಟ್ರದಲ್ಲಿ ತಿಲಕರು, ಪಂಜಾಬಿನಲ್ಲಿ ಲಾಲಾ ಲಜಪತರಾಯ್, ಬಂಗಾಲದಲ್ಲಿ ಬಿಪಿನ್ ಚಂದ್ರಪಾಲ್ ಅವರುಗಳ ಪರಿಶ್ರಮದಿಂದ ಮತ್ತಷ್ಟು ಶಕ್ತಿ ಚೈತನ್ಯ ಪಡೆದವು. ಈ ಮಹನೀಯರೆಲ್ಲರೂ ಭಾರತದ ಪುರಾತನ ಧರ್ಮ, ಸಂಸ್ಕೃತಿಗಳಿಂದ ಸ್ಫೂರ್ತಿ ಪಡೆದು ನವರಾಷ್ಟ್ರೀಯತೆಯ ಬೆಳವಣಿಗೆಗೆ, ನವರಾಷ್ಟ್ರವೊಂದರ ನಿರ್ಮಾಣಕ್ಕೆ ನಾಂದಿ ಹಾಡಿದರು. ಪಾಶ್ಚಿಮಾತ್ಯ ಶಿಕ್ಷಣ, ಸಂಸ್ಕೃತಿಗಳು ಭಾರತೀಯ ಯುವಪೀಳಿಗೆಯ ಮನಸ್ಸನ್ನು ಪರಿವರ್ತಿಸಲು ಇರುವ ಸಾಧನಗಳೆಂದು ಇವರುಗಳು ಭಾವಿಸಿದರು. ಆದ್ದರಿಂದ ಅವರುಗಳು ಪ್ರಾಚೀನ ಭಾರತೀಯ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಜನತೆಯಲ್ಲಿ ಗೌರವಾದರಗಳು ಬೆಳೆಯುವಂತೆ ಮಾಡಿದರು. ಧರ್ಮದೊಂದಿಗೆ ರಾಷ್ಟ್ರೀಯತೆಯನ್ನು ಸಮೀಕರಿಸಿ ಜನರಲ್ಲಿ ಹೊಸ ಜಾಗೃತಿ ಮೂಡುವಂತೆ ಮಾಡಿದರು. ಬಾಲಗಂಗಾಧರ ತಿಲಕರು ಗಣಪತಿ ಹಬ್ಬ, ಶಿವಾಜಿ ಜಯಂತಿಗಳನ್ನು ಆಚರಿಸುವುದರ ಮೂಲಕ ಜನತೆಯನ್ನು ಸಂಘಟಿಸಿ ಅವರಲ್ಲಿ ರಾಷ್ಟ್ರಾಭಿಮಾನ ವಿಕಾಸವಾಗುವಂತೆ ಮಾಡಿದರು. ಜನರಲ್ಲಿ ಸೈನಿಕ ಪ್ರವೃತ್ತಿ ಮೂಡಿಸಲು ತಿಲಕರು ಲಾಟಿಕ್ಲಬ್ಬುಗಳನ್ನು (Lathi-clubs) ಸ್ಥಾಪಿಸಿದರಲ್ಲದೆ, ನವರಾಷ್ಟ್ರೀಯತೆ ಪ್ರಜ್ವಲಿಸುವಂತೆ



ಮಾಡಲು ಕೇಸರಿ ಮತ್ತು ಮರಾಠ ಪತ್ರಿಕೆಗಳನ್ನು ಆರಂಭಿಸಿದರು. ತಿಲಕರಿಗೆ ಭಾರತ ಸ್ವಾತಂತ್ರ್ಯ ಗಳಿಸುವುದು ಒಂದು ಧಾರ್ಮಿಕ ಕರ್ತವ್ಯವಾಗಿತ್ತು. 'ಸ್ವರಾಜ್ಯ ನಮ್ಮ ಆಜನ್ಮ ಸಿದ್ಧ ಹಕ್ಕು; ನಾವು ಅದನ್ನು ಪಡೆದೇ ಪಡೆಯುತ್ತೇವೆ' ಎಂಧು ತಿಲಕರು ಘೋಷಿಸಿದರು. ಸ್ವಾತಂತ್ರ್ಯವೇ ಜೀವನದ ಸಂಕಲ್ಪ ಎಂಬುದಾಗಿ ಅರವಿಂದ ಘೋಷ್ ಹೇಳಿದರು. ಸ್ವಾತಂತ್ರ್ಯ ಬೇಡಿದರೆ ಮಾತ್ರ ಬರುವಂಥದಲ್ಲ; ಅದಕ್ಕಾಗಿ ದುಡಿಯಬೇಕು, ಶ್ರಮಿಸಬೇಕು ಎಂಬುದು ತಿಲಕರ ಖಚಿತ ಅಭಿಪ್ರಾಯವಾಗಿತ್ತು. ಒಟ್ಟಿನಲ್ಲಿ ಸ್ವಧರ್ಮ ಸ್ವರಾಜ್ಯಗಳಿಂದಲೇ ತಮ್ಮ ಉದ್ಧಾರವೆಂಬುದನ್ನು ತೀವ್ರಗಾಮಿಗಳು ತಿಳಿದುಕೊಂಡರು.

4. ತೀವ್ರಗಾಮಿಗಳು ಕಾಂಗ್ರೆಸ್ ಸಂಸ್ಥೆಯಲ್ಲಿ ತಮ್ಮ ಪ್ರಭಾವ ಬೆಳೆಸಿಕೊಳ್ಳಲು ಇದ್ದ ಮತ್ತೊಂದು ಕಾರಣವೆಂದರೆ, ಹೊರ ರಾಜ್ಯಗಳಲ್ಲಿ ಭಾರತೀಯರು ಅನುಭವಿಸಿದ ಅವಹೇಳನ ಮತ್ತು ಅಂತರ ರಾಷ್ಟ್ರೀಯ ರಾಜಕೀಯ ರಂಗದಲ್ಲಿ ಸಂಭವಿಸಿದ ಕೆಲವು ಪ್ರಮುಖ ಘಟನೆಗಳು. ಬ್ರಿಟಿಷ್ ವಸಾಹತುಗಳಲ್ಲಿದ್ದ ಭಾರತೀಯರು ಎಲ್ಲಿಲ್ಲದ ಅವಹೇಳನ ಮತ್ತು ಸಂಕಷ್ಟಗಳನ್ನು ಅನುಭವಿಸುತ್ತಿದ್ದರು. ದಕ್ಷಿಣ ಆಫ್ರಿಕದ ಕೆಲವು ಪ್ರದೇಶಗಳಲ್ಲಿ ಭಾರತೀಯರು ಕಾಲುಹಾದಿಯನ್ನು ಉಪಯೋಗಿಸುವಂತಿರಲಿಲ್ಲ. ಮೇಲ್ದರ್ಜೆಯ ರೈಲ್ವೆ ಬೋಗಿಗಳಲ್ಲಿಭಾರತೀಯರು ಪ್ರಯಾಣ ಮಾಡುವಂತಿರಲಿಲ್ಲ. ಕೆಲವು ಸ್ಥಳಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳುವಂತಿರಲಿಲ್ಲ. ಕೆಲವು ಹೊಟೇಲುಗಳು, ಆಸ್ಪತ್ರೆ ಹಾಗೂ ಶಾಲೆಗಳಲ್ಲಿ ಭಾರತೀಯರಿಗೆ ಪ್ರವೇಶ ನಿರಾಕರಿಸಲಾಗುತ್ತಿತ್ತು. ಭಾರತೀಯರ ಚಲನವಲನಗಳ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಲಾಗಿತ್ತು. ಹೂರ ರಾಷ್ಟ್ರಗಳಲ್ಲಿ ಭಾರತೀಯರು ಅನುಭವಿಸುತ್ತಿದ್ದ ಅಸಮಾನ ಕಷ್ಟಗಳು ಭಾರತದಲ್ಲಿ ತೀವ್ರಗಾಮಿಗಳ ಬಿರುಸಿನ ಚಟುವಟಿಕೆಗಳಿಗೆ ಕಾರಣವಾಯಿತು.

ಅಂತರ ರಾಷ್ಟ್ರೀಯ ರಾಜಕೀಯ ರಂಗದಲ್ಲಿ ಸಂಭವಿಸಿದ ಅನೇಕ ಘಟನೆಗಳು ಭಾರತದ ರಾಷ್ಟ್ರೀಯಚಳವಳಿಯ ಬೆಳವಣಿಗೆಯಲ್ಲಿ ಮಹತ್ವದ ಪರಿಣಾಮ ಬೀರಿದವು. ಉದಾಹರಣೆಗೆ 1904 - 1905 ರ ರಷ್ಯ-ಜಪಾನ್ ಯುದ್ಧ ಅತ್ಯಂತ ಮಹತ್ವದಾಗಿದ್ದು, ಭಾರತೀಯ ರಾಷ್ಟ್ರೀಯವಾದಿಗಳು ಅದರಿಂದ ಹೆಚ್ಚು ಪ್ರಭಾವಿತರಾದರು. ಚಿಕ್ಕ ರಾಷ್ಟ್ರವಾಗಿದ್ದ ಜಪಾನ್ ಬೃಹತ್ ರಾಷ್ಟ್ರವಾದ ರಷ್ಯವನ್ನು ಪರಾಭವಗೊಳಿಸಿದ್ದು, ಪೌರ್ವಾತ್ಯ ಪ್ರಪಂಚವು ಮೇಲೆಳುತ್ತಿರುವ ಶುಭ ಸೂಚನೆಯಾಗಿತ್ತು. ಒಂದು ಪ್ರಬಲ ಆದರೆ ಚಿಕ್ಕ ರಾಷ್ಟ್ರವೊಂದು ಯುರೋಪ್ ರಾಷ್ಟ್ರವೊಂದನ್ನು ಸೋಲಿಸುವುದು ಸಾಧ್ಯವಾಗಿದ್ದರೆ ಭಾರತದಿಂದ ಬ್ರಿಟೀಷರನ್ನು ಹೊರಗಟ್ಟುವುದು ಅಂತಹ ಕಷ್ಟದ ಕೆಲಸವಲ್ಲವೆಂದು ಭಾರತೀಯ ರಾಷ್ಟ್ರೀಯ ನಾಯಕರು ಭಾವಿಸಿದ್ದರು. ಅದೇರೀತಿ ಇಟಲಿ ಫ್ರಾನ್ಸ್ ಮತ್ತು ಐರ್‌ಲ್ಯಾಂಡ್‌ಗಳಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಚಳವಳಿಗಳು ಸಹ ಭಾರತದ ತೀವ್ರಗಾಮಿ ರಾಷ್ಟ್ರೀಯವಾದಿಗಳಿಗೆ ಹೊಸ ಹುರುಪು, ಚೈತನ್ಯಗಳನ್ನು ನೀಡಿದವು.

5. ವೈಸರಾಯ್ ಲಾರ್ಡ್ ಕರ್ಜನ್ನನ ಪ್ರತಿಗಾಮಿ, ಭಾರತ ವಿರೋಧಿ ನೀತಿಗಳು, ಭಾರತದಲ್ಲಿ ತೀವ್ರಗಾಮಿ ರಾಷ್ಟ್ರೀಯತೆಯ ಏಳಿಗೆಗೆ ಎಲ್ಲ ರೀತಿಯ ಸಾಮಗ್ರಿಗಳನ್ನು ಒದಗಿಸಿದವು. ಲಾರ್ಡ್‌ಕರ್ಜನ್ನನು ಒಬ್ಬ ಕಟ್ಟಾ ಸಾಮ್ರಾಜ್ಯಶಾಹಿಯಾಗಿದ್ದು, ದೇಶದಲ್ಲಿ ಮೊದಲೇ ತಾಂಡವವಾಡುತ್ತಿದ್ದ ಅಶಾಂತಿ, ಅತೃಪ್ತಿ,



ಅಸಮಾಧಾನಗಳನ್ನು ಮತ್ತಷ್ಟು ಹೆಚ್ಚಿಸಲು ಕಾರಣನಾದನು. ಭಾರತದಲ್ಲಿ ಸಿವಿಲ್ ಕ್ಷೇತ್ರದಲ್ಲಿ ಉನ್ನತ ಹುದ್ದೆಗಳೆಲ್ಲವು ಬ್ರಿಟೀಷರಿಗೆ ಮಾತ್ರ ಮೀಸಲು ಎಂದು ಬಹಿರಂಗವಾಗಿ ಕರ್ಜನನು ಹೇಳುತ್ತಿದ್ದನು. ಬ್ರಿಟೀಷ್ ಜನಾಂಗದ ಶ್ರೇಷ್ಠತೆಯಲ್ಲಿ ನಂಬಿಕೆ ಹೊಂದಿದ್ದ ಲಾರ್ಡ್‌ಕರ್ಜನನು ಭಾರತವನ್ನು ಆಳಲು ಬ್ರಿಟೀಷರನ್ನು ದೇವರೇ ಆರಿಸಿ ಕಳುಹಿಸಿದ್ದಾನೆ, ಭಾರತಕ್ಕೆ ಸ್ವಾತಂತ್ರ ನೀಡುವುದು ದೇವರ ಇಚ್ಛೆಗೆ ವಿರೋಧವಾಗಿ ನಡೆದಂತೆ ಎಂಬುದಾಗಿ ಅಭಿಪ್ರಾಯ ಪಟ್ಟಿದ್ದನು. ಅವನ ಸಾಮ್ರಾಜ್ಯಶಾಹಿ ಧೋರಣೆ, ಪ್ರಕಟಣೆಗಳು ಭಾರತೀಯರಲ್ಲಿ ತೀವ್ರರೀತಿಯ ಅತೃಪ್ತಿ, ಅಸಂತೋಷಗಳಿಗೆ ಕಾರಣವಾದವು. ಅವನು ಜಾರಿಗೆ ತಂದ ಅನೇಕ ಜನವಿರೋಧಿ ಮಸೂದೆಗಳು ಕಾಂಗ್ರೆಸ್ ಸಂಸ್ಥೆ ಮತ್ತು ಸರ್ಕಾರಗಳಿಗಿದ್ದ ಸಂಬಂಧಗಳನ್ನು ಸಂಪೂರ್ಣವಾಗಿ ಕಡಿದು ಹಾಕಿದುದಲ್ಲದೆ ತೀವ್ರಗಾಮಿಗಳ ಕೈಯನ್ನು ಬಲಗೊಳಿಸಿದವು. ಭಾರತೀಯರನ್ನು ಅವನು ಕಡೆಗಣಿಸಿದ್ದು, ಅವರ ಆಸೆ ಆಕಾಂಕ್ಷೆಗಳ ಬಗ್ಗೆ ಅವನಿಗೆ ಎಳ್ಳಷ್ಟೂ ಸಹಾನುಭೂತಿಯಿರಲಿಲ್ಲ.

1899 ರಲ್ಲಿ ಅವನು ಜಾರಿಗೆ ತಂದ ಕಲ್ಕತ್ತ ಕಾರ್ಪೊರೇಷನ್ ಮಸೂದೆ ಚುನಾಯಿತ ಸದಸ್ಯರ ಸಂಖ್ಯೆಯನ್ನು ಕಡಿಮೆ ಮಾಡಿ, ಅದರಲ್ಲಿ ಎಲ್ಲರೂ ಸರ್ಕಾರಿ ಅಧಿಕಾರಿಗಳೇ ಇರಬೇಕೆಂದು ಪ್ರಕಟಿಸಿತು. ಇದರ ಪರಿಣಾಮವೆಂದರೆ, ಅದರಲ್ಲಿ ಬಹುತೇಕ ವಿದೇಶೀ ಸದಸ್ಯರೇ ಇರುವಂತಾಯಿತು. ಈ ಕುಪ್ರಸಿದ್ಧ ಮಸೂದೆಯನ್ನು ಭಾರತೀಯರು ಉಗ್ರವಾಗಿ ವಿರೋಧಿಸಿದರೂ, (ವಿಶೇಷವಾಗಿ ಕಲ್ಕತ್ತದ ಭಾರತೀಯರು) ಅದರಿಂದ ಯಾವ ಪ್ರಯೊಜನವೂ ಆಗಲಿಲ್ಲ.

1904 ರಲ್ಲಿ ಪ್ರಕಟ ಪಡಿಸಿದ ಅಧಿಕೃತ ರಹಸ್ಯಗಳ ಮಸೂದೆ, ಅಧಿಕೃತ ರಹಸ್ಯಗಳು ಎಂಬುದರ ವ್ಯಾಪ್ತಿಗೆ ಬರುವ ವಿಷಯಗಳ ಸಂಖ್ಯೆಯನ್ನು ಹೆಚ್ಚಿಸಿತು. ರಾಜದ್ರೋಹ ಎಂಬ ಪದದ ವ್ಯಾಖ್ಯೆಯನ್ನು ತಿದ್ದಿ ಅದರ ವ್ಯಾಪ್ತಿಯನ್ನು ವಿಸ್ತರಿಸಲಾಯಿತು. ಸ್ವಾತಂತ್ರ ಚಳುವಳಿಯಲ್ಲಿ ಭಾಗಿಯಾಗಿದ್ದ ಜನರನ್ನು ಬಂಧಿಸಿ ಶಿಕ್ಷಿಸಲು ಸರ್ಕಾರಕ್ಕೆ ಹೆಚ್ಚಿನ ಅಧಿಕಾರ ನೀಡುವುದು ಈ ಮಸೂದೆಯ ಉದ್ದೇಶವಾಗಿತ್ತು. ಈ ಮಸೂದೆಯ ವಿರುದ್ಧ ನಡೆದ ವ್ಯಾಪಕ ಖಂಡನೆಗಳು, ಪ್ರದರ್ಶನಗಳು ಸರ್ಕಾರದ ಮೇಲೆ ಯಾವ ಪರಿಣಾಮವನ್ನು ಬೀರಲಿಲ್ಲ.

1904 ರಲ್ಲಿ ಜಾರಿಗೆ ಬಂದ ಭಾರತೀಯ ವಿಶ್ವವಿದ್ಯಾಲಯ ಮಸೂದೆಯು ಭಾರತೀಯರ ಆಕ್ರೋಶವನ್ನು ದ್ವಿಗುಣಗೊಳಿಸಿತು. ವಿಶ್ವವಿದ್ಯಾಲಯ ಶಿಕ್ಷಣವನ್ನು ಸರ್ಕಾರದ ಅಧಿಕೃತ ಹಿಡಿತಕ್ಕೆ ಒಳಪಡಿಸುವುದು ಮತ್ತು ವಿಶ್ವವಿದ್ಯಾಲಯದ ಪ್ರಮುಖ ಸ್ಥಾನಗಳಿಗೆ, ಸಿಂಡಿಕೇಟ್, ಸೆನೆಟ್‌ಗಳಿಗೆ ಹೆಚ್ಚಾಗಿ ಯೂರೊಪಿಯನ್ನರನ್ನು ನೇಮಕ ಮಾಡುವುದು ಅವನ ಉದ್ದೇಶವಾಗಿತ್ತು. ಭಾರತೀಯ ವಿಶ್ವವಿದ್ಯಾಲಯಗಳ ಸ್ವಾಯತ್ತತೆಯನ್ನು ಈ ಮಸೂದೆ ನಾಶ ಮಾಡಿತಲ್ಲದೆ, ಭಾರತದ ಬುದ್ಧಿಜೀವಿಗಳು, ವಿಚಾರವಂತರನ್ನು ಸದೆಬಡಿಯಲು ಈ ಮಸೂದೆ ಒಂದು ರಾಜಕೀಯ ಸಾಧನವಾಯಿತು. ಈ ಮಸೂದೆಯನ್ನು ವ್ಯಾಪಕವಾಗಿ ಖಂಡಿಸಿದರೂ, ಲಾರ್ಡ್‌ಕರ್ಜನ್ನನು ಭಾತೀಯರ ಖಂಡನೆ, ಪ್ರತಿಭಟನೆಗಳಿಗೆ ಮಹತ್ವ ನೀಡಲೇ ಇಲ್ಲ.



ಭಾರತೀಯರನ್ನು ಕಾಂಗ್ರೆಸ್ಸಿನ ತೀವ್ರಗಾಮಿಗಳನ್ನು ಹೆಚ್ಚು ಕೆರಳಿಸಿ, ಅವರ ತೀವ್ರ ಖಂಡನೆಗೆ ಗುರಿಯಾಗಿದ್ದ ಮತ್ತೊಂದು ಪ್ರಮುಖ ಬೆಳವಣಿಗೆ ಎಂದರೆ 1905ರ ಬಂಗಾಳದ ವಿಭಜನೆ. ಬಂಗಾಳದ ವಿಭಜನೆ ಅತ್ಯಂತ ಜನವಿರೋಧಿ ಮತ್ತು ಅಸ್ವಭಾವಿಕವಾದ ರಾಜಕೀಯ ಕ್ರಮವಾಗಿತ್ತು. ಆಡಳಿತವನ್ನು ಹೆಚ್ಚು ಪರಿಣಾಮಕಾರಿಯನ್ನಾಗಿ ಮಾಡುವ ಉದ್ದೇಶದಿಂದ ಬಂಗಾಳದ ವಿಭಜನೆಯಂತಹ ಕ್ರಮ ತೆಗೆದುಕೊಳ್ಳ ಬೇಕಾಯಿತೆಂದು ಸರ್ಕಾರ ಹೇಳಿದರೂ ಅದೊಂದು ರಾಜಕೀಯ ಕುತಂತ್ರ ಮತ್ತು ಬ್ರಿಟೀಷರ ಒಡೆದು ಆಳುವ ನೀತಿಗೆ ಒಂದು ಪ್ರಮುಖ ನಿದರ್ಶನವಾಗಿತ್ತೆಂದು ಭಾರತೀಯರಿಗೆ ಬಹು ಬೇಗ ಅರಿವಾಯಿತು. ಹಿಂದುಗಳು ಮತ್ತು ಮುಸ್ಲಿಮರನ್ನು ಬೇರ್ಪಡಿಸಿ, ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿ ಇರುವಂತಹ ಪ್ರಾಂತ್ಯವನ್ನು ನಿರ್ಮಿಸುವುದು ಲಾರ್ಡ್‌ಕರ್ಜನನ ಉದ್ದೇಶವಾಗಿತ್ತು. ಬಂಗಾಳದ ವಿಭಜನೆಯನ್ನು ಹಿಂದುಗಳು, ಮುಸ್ಲಿಮರು ವಿಶೇಷವಾಗಿ ಬಂಗಾಳಿಗಳು ಉಗ್ರವಾಗಿ ಪ್ರತಿಭಟಿಸಿದರು. ಈ ಘಟನೆ ಭಾರತದ ರಾಜಕೀಯ ಆಂದೋಲನಕ್ಕೆ ಒಂದು ಹೊಸ ತಿರುವು ನೀಡಿತು. ಸುರೇಂದ್ರ ನಾಥ ಬ್ಯಾನರ್ಜಿ, ಬಿಪಿನ್ ಚಂದ್ರಪಾಲ್, ಎ.ರಸೂಲ್ ಅಶ್ವಿನಿಕುಮಾರ ದತ್ತ ಮತ್ತು ಅರವಿಂದ ಘೋಷರ ಮುಂದಾಳತ್ವದಲ್ಲಿ ಬಂಗಾಳದ ವಿಭಜನೆಯ ವಿರುದ್ಧ ಚಳುವಳಿಯ ಮಹಾಪೂರವೇ ಹರಿದು ಬಂದಿತು. ಚಳವಳಿಗಾರರು ಬಂಕಿಮ ಚಂದ್ರರು ರಚಿಸಿದ್ದ ವಂದೇಮಾತರಂ ಗೀತೆಯನ್ನು ಸ್ಫೂರ್ತಿಗೀತೆಯಾಗಿ ಹಾಡುತ್ತಿದುದರಿಂದ, ಈ ಚಳವಳಿಯನ್ನು ವಂದೇಮಾತರಂ ಚಳವಳಿ ಎಂದು ಬಣ್ಣಿಸಲಾಗಿದೆ. ಬಂಗಾಳದಲ್ಲಿ ಚಳವಳಿ ತ್ವರಿವಾಗಿ ಹರಡಿದ್ದಲ್ಲದೆ ಇತರ ಪ್ರಾಂತ್ಯಗಳಿಗೂ ಹರಡಿತು. ಬಂಗಾಳದ ವಿಭಜನೆ ರಾಷ್ಟ್ರಾದ್ಯಂತ ಒಂದು ಹೊಸ ರಾಷ್ಟ್ರೀಯ ಪ್ರಜ್ಞೆ ಮೂಡಿಸಿದಲ್ಲದೆ, ತೀವ್ರಗಾಮಿ ರಾಷ್ಟ್ರೀಯತೆಯು 1906 ವೇಳೆಗೆ ಒಂದು ಸ್ಪಷ್ಟ ರೂಪು ತಳೆಯಲು ಸಾಧ್ಯವಾಯಿತು. ಬಂಗಾಳದ ವಿಭಜನೆಯ ವಿರುದ್ಧ ನಡೆದ ಚಳುವಳಿಯ ವ್ಯಾಪಕತೆ, ಗಾಢತೆ ಎಷ್ಟಿತ್ತೆಂದರೆ, 1911 ರ ವೇಳೆಗೆ ಸರ್ಕಾರ ವಿಭಜನೆಯನ್ನು ರದ್ದುಗೋಳಿಸಬೇಕಾಯಿತು.

**ಸೂರತ್ ಒಡಕು 1907:**

ಮೇಲೆ ತಿಳಿಸಿದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಬೆಳವಣಿಗೆಗಳು 1906-1907 ವೇಳೆಗೆ ಕಾಂಗ್ರೆಸ್ ಸಂಸ್ಥೆ ನಡೆಸುತ್ತಿದ್ದ ರಾಷ್ಟ್ರೀಯ ಹೋರಾಟಕ್ಕೆ ಹೊಸ ಸ್ಫೂರ್ತಿ, ಸ್ವರೂಪ ತಂದುಕೊಟ್ಟವು. ಕಾಂಗ್ರೆಸ್‌ನಲ್ಲಿಯೋ ಪ್ರವರ್ಧಮಾನಕ್ಕೆ ಬರುತ್ತಿದ್ದ ತೀವ್ರಗಾಮಿಗಳು, ಬ್ರಿಟೀಷರನ್ನು ಬೇಡಿಕೊಳ್ಳುವುದರಿಂದ, ಮನವಿಗಳನ್ನು ಸಲ್ಲಿಸುವುದರಿಂದ ಮತ್ತು ಮಾತಿನ ಪ್ರತಿಭಟನೆಗಳಿಂದ ಏನನ್ನು ಸಾಧಿಸಲು ಸಾಧ್ಯವಿಲ್ಲವೆಂದು ತಿಳಿದರು. ತೀವ್ರಗಾಮಿಗಳ ಗುಂಪಿನ ಪ್ರಮುಖ ನಾಯಕರಾದ ಬಾಲಗಂಗಾಧರ ತಿಲಕ್, ಲಾಲಾ ಲಜಪತ್ ರಾಯ್, ಬಿಪಿನ್ ಚಂದ್ರ ಪಾಲ್ ಮುಂತಾದವರೆಲ್ಲರೂ ಬ್ರಿಟೀಷರ ವಿರುದ್ಧ ಹೋರಾಟ ಹೆಚ್ಚು ಪರಿಣಾಮಕಾರಿಯಾಗಬೇಕಾದರೆ ತೀವ್ರರೀತಿಯ ಕ್ರಮಗಳು ಅವಶ್ಯ ಮತ್ತು ಬ್ರಿಟೀಷರನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕೆಂದು ರಾಷ್ಟ್ರಕ್ಕೆ ಕರೆಕೊಟ್ಟರು. ಐರ್‌ಲ್ಯಾಡ್, ಜಪಾನ್ ಮತ್ತು ಇಟಲಿ ರಾಜ್ಯಗಳ ದೃಷ್ಟಾಂತಗಳನ್ನು ಗಮನಿಸಿ ಅವರು ಅನುಸರಿಸಿದ ಮಾರ್ಗವನ್ನು ಅನುಸರಿಸಿ ಎಂದು



ಬಾಲಗಂಗಾಧರ ತಿಲಕ್ ಕಾಂಗ್ರೆಸ್ಸರಿಗೆ ಹಾಗೂ ಜನತೆಗೆ ಕರೆನೀಡಿದರು.

ತೀವ್ರಗಾಮಿಗಳು ಹೊಸ ಸ್ಫೂರ್ತಿ, ಹೋರಾಟದ ಹರಿಕಾರರಾದರು. ಅವರು ಉದಾರತೆ ಮತ್ತು ರಾಜ್ಯಾಂಗ ಬದ್ದವಾದ ಕಾರ್ಯಕ್ರಮಗಳಿಗೆ ಬದಲಾಗಿ ಉಗ್ರಹೋರಾಟ ಮತ್ತು ಸಾಮೂಹಿಕ ಕ್ರಮಗಳನ್ನು (agitation and mass action) ಬ್ರಿಟೀಷರ ವಿರುದ್ದ ಬೆಂಬಲಿಸಿದರು. ಸ್ನೇಹ ಸಹಕಾರ, ಹೊಂದಾಣಿಕೆ ಮತ್ತು ಸೌಮ್ಯರೀತಿಯ ಚಳವಳಿಯ ಕ್ರಮಗಳಲ್ಲಿ ನಂಬಿಕೆ ಇಟ್ಟಿದ್ದ ಕಾಂಗ್ರೆಸ್ಸಿನ ಮಂದಗಾಮಿಗಳಿಗೂ ಉಗ್ರ ರಾಷ್ಟ್ರೀಯತೆ ಹೋರಾಟಗಳನ್ನು ಪ್ರತಿಪಾದಿಸಿದ ತೀವ್ರಗಾಮಿಗಳಿಗೂ ಘರ್ಷಣೆ ಅನಿವಾರ್ಯವಾಯಿತು. ವಿರುದ್ದ ಮಾರ್ಗಗಳನ್ನು ಅನುಸರಿಸುತ್ತಿದ್ದ ಕಾಂಗ್ರೆಸಿನ ಎರಡೂ ಬಣಗಳು ಪ್ರತ್ಯೆಕವಾಗುವುದೂ ಸಹ ಅನಿವಾರ್ಯ ವಾಯಿತು.

ಆದರೆ ಸೌಮ್ಯವಾದಿ ನಾಯಕರುಗಳಾದ ಫಿರೋಜ್ ಷಾ ಮೆಹ್ತಾ, ದಾದಾಬಾಯಿ ನವರೋಜಿ, ಸುರೇಂದ್ರನಾಥ ಬ್ಯಾನರ್ಜಿ, ಗೊಪಾಲಕೃಷ್ಣಗೋಖಲೆ ಮುಂತಾದವರು ಬ್ರಿಟೀಷರ ವಿರುದ್ಧ ಹಿಂಸಾತ್ಮಕ ಹೋರಾಟದಿಂದ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ತಿಳಿದಿದ್ದರು. ಬ್ರಿಟೀಷರೊಡನೆ ಮಧುರ ಬಾಂಧವ್ಯವನ್ನಿಟ್ಟುಕೊಂಡು, ಕ್ರಮೇಣ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳನ್ನು ತರಲು ತಮ್ಮ ಬಯಕೆ ವ್ಯಕ್ತಪಡಿಸಿದರು. ಸೌಮ್ಯವಾದಿ ನಾಯಕರುಗಳಿಗೆ ಇನ್ನೂ ಬ್ರಿಟೀಷರ ನ್ಯಾಯಪರತೆಯಲ್ಲಿ ನಂಬಿಕೆ ಇತ್ತು. ಕಾಂಗ್ರೆಸಿನ ಎರಡು ಗುಂಪುಗಳಿಗೆ ಇದ್ದ ಭಿನ್ನಾಭಿಪ್ರಾಯಗಳು 1905ರ ನಂತರ ಮತ್ತಷ್ಟು ಆಳವಾಗಿ ಬೇರೂರಿದವು. ಭಾರತೀಯರು ತಮ್ಮ ರಾಜಕೀಯ ಹಕ್ಕುಗಳಿಗಾಗಿ ಬ್ರಿಟೀಷರ ವಿರುದ್ಧ ಉಗ್ರ ಹೋರಾಟ ನಡೆಸುವುದನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ ಎಂಬುದು ತೀವ್ರಗಾಮಿಗಳ ಖಚಿತ ಅಭಿಪ್ರಾಯವಾಗಿತ್ತು. ಎರಡು ಬಣಗಳಿಗೆ ಕೋಪತಾಪಗಳು ಉಂಟಾದವು. ಘರ್ಷಣೆ ಅನಿವಾರ್ಯವಾಯಿತು. ಕಾಂಗ್ರೆಸ್ಸಿನ ನಾಯಕತ್ವವನ್ನು ತಮ್ಮ ಕೈಗೆ ತೆಗೆದುಕೊಳ್ಳುವುದು ಮೊದಲ ಕರ್ತವ್ಯವೆಂದು ತೀವ್ರಗಾಮಿಗಳು ಭಾವಿಸಿದ್ದರು.1907 ರ ವೇಳೆಗೆ ಅಂತಹ ದೃಢ ಸಂಕಲ್ಪವನ್ನು ಮಾಡಿದರು.

ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ತಳಮಳದ ವಾತಾವರಣದಲ್ಲಿ 1907ರಲ್ಲಿ ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನ ಸೂರತ್‌ನಲ್ಲಿ ನಡೆಯಿತು. ಸೂರತನಲ್ಲಿ ಕಾಂಗ್ರೆಸ್ ತನ್ನ ಅಧೀವೇಶನ ನಡೆಸಲು ತೀರ್ಮಾಸಿದ್ದನ್ನೇ ತೀವ್ರಗಾಮಿಗಳು ಪ್ರಶ್ನಿಸಿದರು. ಸೂರತ್ ನಗರದಲ್ಲಿ ಸ್ಥಳೀಯ ಬೆಂಬಲವಿರುವುದರಿಂದಲೇ ಅಲ್ಲಿ ಅಧಿವೇಶನ ನಡೆಸಲು ಸೌಮ್ಯವಾದಿಗಳು ತೀರ್ಮಾನಿಸಿದ್ದರೆಂದು ಉಗ್ರವಾದಿಗಳು ಆಪಾದಿಸಿದರು. ತೀವ್ರಗಾಮಿಗಳು ಬಾಲಗಂಗಾಧರ ತಿಲಕರನ್ನು ಅಧಿವೇಶನದ ಅಧ್ಯಕ್ಷರನ್ನಾಗಿ ಆರಿಸಿಕೊಳ್ಳಲು ಬಯಸಿದರು. ಆದರೆ ಇದನ್ನು ವಿರೋಧಿಸಿದ ಸೌಮ್ಯವಾದಿಗಳು, ಅಧಿವೇಶನದ ಅಧ್ಯಕ್ಷ ಸ್ಥಾನಕ್ಕೆ ರಾಸ್ ಬಿಹಾರಿ ಘೋಷರನ್ನು ಆರಿಸಲು ನಿರ್ಧರಿದರು. ಇದನ್ನು ತೀವ್ರಗಾಮಿಗಳು ವಿರೋಧಿಸಿದರು. ಡಿಸೆಂಬರ್ 27, 1907 ರಂದು ಕಾಂಗ್ರೆಸ್ ಅಧಿವೇಶನ ಆರಂಭವಾದಾಗ ತಿಲಕ್ ಅವರ ಅನುಯಾಯಿಗಳು ಗೊಂದಲದ ಪರಿಸ್ಥಿತಿ ಉಂಟುಮಾಡಿದರು. ಅವ್ಯವಸ್ಥೆಯ ಪರಿಸ್ಥಿತಿಯಿಂದಾಗಿ ಅಧಿವೇಶನ ಸರಿಯಾಗಿ ನಡೆಯಲು ಸಾಧ್ಯವಾಗಲೇ ಇಲ್ಲ. ಕಾಂಗ್ರೆಸ್



ಇಬ್ಭಾಗವಾಯಿತು. ಸೌಮ್ಯವಾದಿಗಳ ಕೈಯ್ಯಲ್ಲಿ ಅಧಿಕೃತ ಸಂಸ್ಥೆ ಉಳಿಯಿತು ಮತ್ತು ಅವರು ರಾಜ್ಯಾಂಗಬದ್ಧ ಮಾರ್ಗಗಳನ್ನು ಅನುಸರಿಸಿ ತಮ್ಮ ಗುರಿಮುಟ್ಟಲು ನಿರ್ಧರಿಸಿದರು. ತೀವ್ರಗಾಮಿಗಳು ಪ್ರತ್ಯೇಕವಾಗಿಯೇ ಸಭೆ ನಡೆಸಿದರು ಮತ್ತು ಒಂಬತ್ತು ವರ್ಷಗಳ ಕಾಲ ತೀವ್ರಗಾಮಿ ಪಂಗಡವು ಕಾಂಗ್ರೆಸ್ ನಿಂದ ಹೊರಗುಳಿಯಿತು. ಕಾಂಗ್ರೆಸ್ನ ಈ ವಿಭಜನೆ ಸೂರತ್ ಒಡಕು ಎಂದು ಹೆಸರು ಪಡೆಯಿತು. 1915-1916 ವರೆಗೆ ಈ ಒಡಕು ಹಾಗೆಯೇ ಮುಂದುವರೆಯಿತು. ಈ ಅವಧಿಯಲ್ಲಿ ತೀವ್ರಗಾಮಿಗಳ ಪಂಗಡವು ಜನತೆಯ ಪ್ರೀತಿ ವಿಶ್ವಾಸಗಳನ್ನು ಮತ್ತು ಬೆಂಬಲವನ್ನು ಗಳಿಸುವಲ್ಲಿ ಯಶಸ್ವಿಯಾಯಿತು.

**ತೀವ್ರಗಾಮಿಗಳ ಕಾರ್ಯಕ್ರಮ:**

ಬಾಲಗಂಗಾಧರ ತಿಲಕರು ತೀವ್ರಗಾಮಿಗಳ ಅಗ್ರಮಾನ್ಯ ಮತ್ತು ಜನಪ್ರಿಯ ನಾಯಕರಾಗಿದ್ದರು. ಅಸಾಧಾರಣವಾದ ವಿದ್ವತ್ತು, ಉತ್ತಮ ವಾಕ್ಚಾತುರ್ಯ ಹೊಂದಿದ್ದ ಬಾಲಗಂಗಾಧರ ತಿಲಕರು ಆಗಿನ ಕಾಲದ ಅತ್ಯಂತ ಪ್ರಭಾವಶಾಲಿ ರಾಷ್ಟ್ರ ನಾಯಕರಲ್ಲಿ ಅಗ್ರಗಣ್ಯರಾಗಿದ್ದರು. ಸ್ವರಾಜ್ಯವು ನಮ್ಮ ಆಜನ್ಮಸಿದ್ಧ ಹಕ್ಕು, ಅದನ್ನು ನಾವು ಪಡೆದೇ ಪಡೆಯುತ್ತೇವೆ ಎಂಬುದು ಅವರ ಪ್ರಸಿದ್ಧ ಘೋಷಣೆ ಜನಜಾಗೃತಿ ಉಂಟುಮಾಡಿ ಭಾರತ ಸ್ವಾತಂತ್ರ್ಯದ ಕಹಳೆ ಮೂಳಗಿಸಿ ಬ್ರಿಟೀಷ್‌ಸಾಮ್ರಾಜ್ಯದ ಅಸ್ತಿ ಭಾರವನ್ನೇ ಅಭದ್ರಗೊಳಿಸಿದ ಅಸಮಾನ್ಯ ನಾಯಕರು. ಬಾಲಗಂಗಾಧರ ತಿಲಕರು ಭಾರತೀಯರಲ್ಲಿ ರಾಜಕೀಯ ಶಿಕ್ಷಣ, ಪ್ರಜ್ಞೆ ಮೂಡಿಸುವ ಗುರಿಯಿಂದ ಕೇಸರಿ ಮತ್ತು ಮರಾಠ ಎಂಬ ಎರಡು ಪತ್ರಿಕೆಗಳನ್ನು ಆರಂಭಿಸಿದರು. ಅವರು ಅರಂಭಿಸಿದ ಪತ್ರಿಕೆಗಳು ವಿಚಾರ ಪ್ರಚೋದಕವಾಗಿದ್ದುವು ತಮ್ಮ ಹರಿತವಾದ, ಶಕ್ತಿಯುತವಾದ ಲೇಖನಿಯಿಂದ ತಿಲಕರು ಆಳರಸರ ದಬ್ಬಾಳಿಕೆ, ದೌರ್ಜನ್ಯ, ಕುಟಿಲ ನೀತಿ ಮತ್ತು ಮೋಸದ ಪ್ರಕರಣಗಳನ್ನು ಬಯಲಿಗೆಳೆದು, ಜನರಲ್ಲಿ ಜಾಗೃತಿ ಮೂಡಿಸಿದರು. ಧಾರ್ಮಿಕ ಹಿನ್ನೆಲೆಯಲ್ಲಿ ಅಡಗಿದ್ದ ರಾಷ್ಟ್ರಾಭಿಮಾನ ಆತ್ಮಗೌರವಗಳನ್ನು ಜನರು ಅರಿಯುವಂತೆ ಮಾಡಿದ ಕೀರ್ತಿ ತಿಲಕರಿಗೆ ಸಲ್ಲಬೇಕು. ರಾಜಕೀಯ ಹಕ್ಕುಗಳು ದೊರೆಯುವುದು ಹೋರಾಟದಿಂದ ಮಾತ್ರ ಎಂದು ಹೇಳಿ ಜನರನ್ನು ಎಚ್ಚರಿಸಿದರು. ನಮಗೆ ರಾಜ್ಯವಲ್ಲ ಸ್ವರಾಜ್ಯ ಬೇಕು ಎಂದು ಗುಡುಗಿ ಸ್ವರಾಜ್ಯ ಪಡೆಯಲು ಎಲ್ಲ ರೀತಿಯ ಹೋರಾಟ ಮತ್ತು ತ್ಯಾಗಗಳಿಗೆ ಸದಾಸಿದ್ಧರಾಗಿರುವಂತೆ ಜನತೆಗೆ ಕರೆ ನೀಡಿದರು.

ಬಾಲಗಂಗಾಧರ್ ತಿಲಕರು ಮತ್ತು ಇನ್ನಿತರ ತೀವ್ರಗಾಮಿ ನಾಯಕರು ನಾಲ್ಕು ಅಂಶಗಳ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ತೀವ್ರಗಾಮಿಗಳ ನಾಲ್ಕು ಅಂಶಗಳ ಕಾರ್ಯಕ್ರಮವೆಂದರೆ, 1. ಸ್ವರಾಜ್ಯ 2. ಬಹಿಷ್ಕಾರ, 3. ಸ್ವದೇಶಿ ಮತ್ತು 4.ರಾಷ್ಟ್ರೀಯ ಶಿಕ್ಷಣ. ಸ್ವರಾಜ್ಯ ಅಥವಾ ಸಂಪೂರ್ಣ ಸ್ವಯಂಮಾಡಳಿತ ತೀವ್ರಗಾಮಿಗಳ ಅಂತಿಮಗುರಿಯಾಗಿತ್ತು. ಬಹಿಷ್ಕಾರ ಆ ಅಂತಿಮ ಗುರಿಮುಟ್ಟಲು ಇದ್ದ ಒಂದು ಸಾಧನ ಅಥವಾ ಮಾರ್ಗ ತೀವ್ರಗಾಮಿಗಳು ಸ್ವದೇಶಿ ವಸ್ತುಗಳ ಸ್ವೀಕಾರ ಹಾಗೂ ವಿದೇಶೀ ವಸ್ತುಗಳ ಬಹಿಷ್ಕಾರ ಚಳುವಳಿಗಳನ್ನು ಅತ್ಯಂತ ಶಕ್ತಿಯುತವಾಗಿ ನಡೆಸಿಕೊಂಡು ಬಂದರು. ಸ್ವಾವಲಂಬನೆ ಮತ್ತು ಸ್ವತಂತ್ರ ಕ್ರಮಗಳು ತೀವ್ರಗಾಮಿಗಳ ಸೂತ್ರಗಳಾಗಿದ್ದವು. ತೀವ್ರಗಾಮಿಗಳು 1907 ರಿಂದ 1916 ರ ಅವಧಿಯಲ್ಲಿ ತಮ್ಮ ನಾಲ್ಕು ಅಂಶಗಳ ಕಾರ್ಯಕ್ರಮದ ಮೂಲಕ ಭಾರತೀಯರ ನೈತಿಕ



ಮತ್ತು ಭೌತಿಕ ಏಳಿಗೆಗಾಗಿ ಶ್ರಮಿಸಿದರು. ಕಾರ್ಮಿಕರು, ವಿದ್ಯಾರ್ಥಿಗಳು ಮತ್ತು ಇತರ ವರ್ಗಗಳ ಬೆಂಬಲದಿಂದ ದೇಶದಾದ್ಯಂತ ಮೆರವಣಿಗೆಗಳು, ಸಾರ್ವಜನಿಕ ಸಭೆಗಳನ್ನು ನಡೆಸಿ ಜನರನ್ನು ಸಂಘಟಿಸಿದರು. ವಿದೇಶಿ ವಸ್ತುಗಳಿಗೆ ಬದಲಾಗಿ ಸ್ವದೇಶಿ ವಸ್ತುಗಳನ್ನು ಉಪಯೋಗಿಸಲು ಜನರು ಕಂಕಣ ತೊಟ್ಟರು. ತೀವ್ರಗಾಮಿಗಳು ಧಾರ್ಮಿಕ ಕ್ರಾಂತಿಕಾರಕ ಉತ್ಸಾಹ ಮನೋಭಾವನೆಗಳಿಂದ ಹೋರಾಟ ನಡೆಸಿ ಜನರು ಸ್ವಾತಂತ್ರ್ಯ ಸ್ವಯಮಾಡಳಿತಕ್ಕಾಗಿ ಹೆಚ್ಚು ಹೆಚ್ಚು ಹಂಬಲಿಸುವಂತೆ ಮಾಡಿದರು.

1906 ರಿಂದ 1910 ರ ಅವಧಿಯಲ್ಲಿ ಕೆಲವು ತೀವ್ರಗಾಮಿಗಳು ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗಿದ್ದರು. ಬ್ರಿಟೀಷರನ್ನು ಭಾರತದಿಂದ ಹೊಡೆದೊಡಿಸಲು ಹೆಚ್ಚು ಶಕ್ತಿ ಉಪಯೋಗಿಸ ಬೇಕೆಂದು, ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗಬೇಕೆಂದು, ಕೊಲೆ, ಲೂಟಿಗಳು ಬ್ರಿಟೀಷರಿಗೆ ಸರಿಯಾದ ಪಾಠಕಲಿಸುವುದೆಂದು ನಂಬಿದ್ದರು. ಇವರುಗಳು ಉಗ್ರಗಾಮಿಗಳೆಂದು (terrorists) ಹೆಸರು ಪಡೆದರು. ಉಗ್ರಗಾಮಿಗಳು ತಮ್ಮದೇ ಕಾರ್ಯಕ್ರಮ ಹೊಂದಿದರು. ವಿದ್ಯಾವಂತ ಭಾರತೀಯರಲ್ಲಿ ಬ್ರಿಟೀಷರ ಬಗ್ಗೆ ದ್ವೇಷ ಮತ್ತು ಸೇಡಿನ ಭಾವನೆ ಬೆಳೆಯುವಂತೆ ಮಾಡುವುದು, ತಮ್ಮ ಗುರಿಗಳನ್ನು ಸಾಧಿಸಲು ಹಣ ಮತ್ತು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವುದು, ಗುರಿಗಳನ್ನು ಸಾಧಿಸಲು ಹಣ ಮತ್ತು ಬಹಿಷ್ಕಾರದ ಸಭೆಗಳನ್ನು ನಡೆಸಲು, ವಂದೇಮಾತರಂ ಮೆರವಣಿಗೆ ನಡೆಸಲು ಸರ್ಕಾರದ ಆಸ್ತಿ ಪಾಸ್ತಿಗಳನ್ನು ನಾಶಮಾಡಲು ಹಾಗೂ ರಾಜಕೀಯ ಕೊಲೆಗಳನ್ನು ನಡೆಸಲು ಭಾರತೀಯ ಯುವಕರಿಗೆ ತರಬೇತಿ ನೀಡುವುದು, ಉಗ್ರವಾದಿಗಳ ಕಾರ್ಯಕ್ರಮಗಳಲ್ಲಿ ಕೆಲವು. ಸರ್ಕಾರದ ವಿರುದ್ಧ ಗುಪ್ತಗಾಮಿ ಹಿಂಸಾತ್ಮಕ ಚಟುವಟಿಕೆಗಳು ಮತ್ತು ಖಜಾನೆಗಳನ್ನು ದೋಚಲು ಪ್ರಯತ್ನಿಸಲಾಯಿತು. ಹಿಂಸಾತ್ಮಕ ಚಳವಳಿಗಳು ಭಾರತದಾದ್ಯಂತ ನಡೆದು- ವಿಶೇಷವಾಗಿ ಬಂಗಾಳ, ಪಂಜಾಬು, ಮಧ್ಯ ಪ್ರದೇಶಗಳು ಪಶ್ಚಿಮ ಭಾರತ ಹಾಗೂ ಮದರಾಸುಗಳಲ್ಲಿ (ಈಗಿನ ಚೆನ್ನೈ)- ಅರಾಜಕತೆ ತಲೆದೊರಿತು. ಸರ್ಕಾರ ತೀವ್ರಗಾಮಿಗಳ ಉಗ್ರವಾದಿಗಳ ಚಟುವಟಿಕೆಗಳನ್ನು ಹತ್ತಿಕ್ಕಲು ಪ್ರಯತ್ನಿಸಿತು. ಸಹಸ್ರಾರು ಸಂಖ್ಯೆಯಲ್ಲಿ ತನ್ನ ವಿರೋಧಿಗಳನ್ನು ಸದೆ ಬಡಿದು ಸೆರೆಮನೆಗೆ ಕಳುಹಿಸಲಾಯಿತು. ಈ ರೀತಿಯ ಹಿಂಸಾತ್ಮಕ ಚಟುವಟಿಕೆಗಳಿಗೆ, ದೊಂಬಿ, ದರೋಡೆ ಮತ್ತು ಸರ್ಕಾರದ ಅಧಿಕಾರಿಗಳ ಕೊಲೆಗೆ ಬಾಲಗಂಗಾಧರ ತಿಲಕರೇ ಕಾರಣವೆಂದು ತಿಳಿದು ಅವರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ, 1908ರ ಜುಲೈ ತಿಂಗಳಲ್ಲಿ ಅವರನ್ನು ಬಂಧಿಸಿ, ತಿಲಕರನ್ನು ಬರ್ಮಾದ ಮಾಂಡಲೆ ಸೆರೆಮನೆಯಲ್ಲಿ ಆರು ವರ್ಷಗಳ ಕಾಲ ಬಂಧಿಯಾಗಿ ಇಡಲಾಯಿತು. ಉಗ್ರಗಾಮಿಗಳ ವಿರುದ್ಧ ಅನೇಕ ನಿರ್ಬಂಧಗಳನ್ನು ಹಾಕಿ ಅವರ ಚಟುವಟಿಕೆಗಳನ್ನು ಹತ್ತಿಕ್ಕಲು ಸರ್ಕಾರ ಎಲ್ಲ ಕ್ರಮಗಳನ್ನು ತೆಗೆದು ಕೊಂಡಿತು.

ಈ ಮಧ್ಯೆ ಕಾಂಗ್ರೆಸಿನ ಸೌಮ್ಯವಾದಿಗಳನ್ನು ತಡಪ್ತಿ ಪಡೆಸುವ ಸಲುವಾಗಿ 1909 ರಲ್ಲಿ ಮಿಂಟೂ-ಮಾರ್ಲೆ ಸುಧಾರಣೆಗಳನ್ನು ಸರ್ಕಾರ ಜಾರಿಗೆ ತಂದಿತು. ಇದರ ಜೊತೆಗೆ 1911 ರಲ್ಲಿ ಬಂಗಾಳದ ವಿಭಜನೆಯನ್ನು ರದ್ದು ಗೊಳಿಸಿ ಮಂದಗಾಮಿಗಳನ್ನು ಸಂತೋಷ ಪಡಿಸಲು ಸರ್ಕಾರ ಪ್ರಯತ್ನಿಸಿತು. ಆದರೆ ಸರ್ಕಾರದ ಈ ವಿಧಾನಗಳು ಮಂದಗಾಮಿಗಳನ್ನು ತೃಪ್ತಿಪಡಿಸುವಲ್ಲಿ ವಿಫಲವಾದುವು. 1909ರ



ಮಿಂಟೋ- ಮಾರ್ಲೆ ಸುಧಾರಣೆಗಳು ಪ್ರಜಾಪ್ರತಿನಿಧಿಗಳಿಗೆ ಯಾವ ಜವಾಬ್ದಾರಿಯನ್ನು ನೀಡಲಿಲ್ಲ, ಮತ್ತು ಭಾರತದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಅವಕಾಶ ಮಾಡಿಕೊಡಲಿಲ್ಲ, ಹಾಗಾಗಿ ಭಾರತದ ರಾಜಕೀಯ ಸಮಸ್ಯೆ, ಬೇಡಿಕೆಗಳಿಗೆ ಯಾವುದೇ ಸಮರ್ಪಕ ಉತ್ತರ ನೀಡುವಲ್ಲಿ ಸಫಲವಾಗಲಿಲ್ಲ. ಮುಸ್ಲಿಮರಿಗೆ ಪ್ರತ್ಯೇಕ ಚುನಾವಣಾ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದ್ದರಿಂದ ಮಂದಗಾಮಿಗಳು ಅಸಮಾಧಾನ ಪಟ್ಟರು. ಬ್ರಿಟೀಷರು ವಿಭಜಿಸಿ ಆಳು ಎಂಬ ನೀತಿ ಅನುಸರಿಸಿ ಮುಸ್ಲಿಮರಿಗೆ ಕೆಲವು ರಿಯಾಯಿತಿಗಳನ್ನು ಕೊಟ್ಟಿದ್ದರಿಂದ ಮಂದಗಾಮಿಗಳು ಸಹಜವಾಗಿಯೇ ಸರ್ಕಾರದಿಂದ ದೂರವಾದರು. ಭಾರತೀಯರ ನಿರೀಕ್ಷೆಗಳನ್ನು ಮಿಂಟೊ- ಮಾರ್ಲೆ ಸುಧಾರಣೆಗಳು ಮುಟ್ಟಲು ಸಾಧ್ಯವಾಗದ್ದರಿಂದ, ಭಾರತೀಯರ ಅತೃಪ್ತ ಅಸಮಾಧಾನಗಳು ಹಾಗೆಯೇ ಮುಂದುವರೆದವು.

**ಮಂದಗಾಮಿಗಳು ತೀವ್ರಗಾಮಿಗಳು ಮತ್ತೆ ಒಂದುಗೂಡಿದ್ದು:**

1914 ರಲ್ಲಿ ಬಾಲ ಗಂಗಾಧರ ತಿಲಕರು ಸೇರಿದಂತೆ ಇನ್ನು ಅನೇಕ ರಾಜಕೀಯ ಮುಖಂಡರನ್ನು ಸೆರೆಮನೆಯಿಂದ ಬಿಡುಗಡೆ ಮಾಡಲಾಯಿತು. ಭಾರತೀಯರಿಗೆ ಸ್ವರಾಜ್ಯ ತಂದ ಕೊಡಲು ತಿಲಕರು ತಮ್ಮ ಪ್ರಯತ್ನ ಮುಂದುವರೆಸಲು ನಿರ್ಧರಿಸಿದರು. ಇಡೀ ರಾಷ್ಟ್ರದಲ್ಲಿನ ರಾಜಕೀಯ ವಾತಾವರಣ, ಸಂದರ್ಭಗಳನ್ನು ಗಮನಿಸಿದ ತಿಲಕರು, ಸೌಮ್ಯವಾದಿಗಳ ನೇತೃತ್ವದಲ್ಲಿನ ಕಾಂಗ್ರೆಸ್ ಚಳವಳಿಯನ್ನು ಮತ್ತೆ ಸಂಘಟಿಸಲು ನಿಸ್ತೇಜ ವಾಗಿದೆಯೆಂಬುದನ್ನು ಅರಿತರು. ಮೊದಲನೇ ಮಹಾಯುದ್ಧದ ಸಮಯದಲ್ಲಿ ಭಾರತೀಯರು ಬ್ರಿಟೀಷರಿಗೆ ನೀಡಿದ ನೆರವು, ಸಹಕಾರಗಳ ದೃಷ್ಟಿಯಿಂದ, 1909 ರ ಮಾರ್ಲೆ-ಮಿಂಟೋ ಸುಧಾರಣೆಗಳು ಸಹ ತುಂಬಾ ಅತೃಪ್ತಿಕರವಾಗಿದ್ದು ಭಾರತೀಯರು ಒಂದು ರೀತಿಯ ತಳಮಳ ಅಸಂತೋಷದಿಂದಿರುವುದನ್ನು ಗಮನಿಸಿದರು. ಕಾಂಗ್ರೆಸ್ಸಿನ ಎರಡೂ ಬಣಗಳು ಮತ್ತೆ ಒಂದಾಗಿ ಹೊಸ ಚೈತನ್ಯ ಹುರುಪಿನಿಂದ ಸ್ವರಾಜ್ಯಕ್ಕಾಗಿ ಮತ್ತೆ ದೃಢ ಸಂಕಲ್ಪ ಮಾಡಬೇಕಾಗಿದೆಯೆಂದು ಹೇಳಿದರು. ತಿಲಕರು ತಮ್ಮ ಬಿಡುಗಡೆಯ ನಂತರ ಈ ನಿಟ್ಟಿನಲ್ಲಿ ಕಾರ್ಯೋನ್ಮುಕರಾದರು. ಸೌಮ್ಯವಾದಿ ಬಣದ ಇಬ್ಬರು ಮಹಾಚೇತನಗಳಾಗಿದ್ದ ಗೊಪಾಲ ಕೃಷ್ಣ ಗೋಖಲೆ ಮತ್ತು ಫಿರೋಜ್ ಷಾ ಮೆಹ್ತಾ ಅವರು ನಿಧನರಾದರು. ಇನ್ನುಳಿದ ಸುರೇಂದ್ರನಾಥ ಬ್ಯಾನರ್ಜಿ, ಡಿ.ಇ.ವಾಚಾ ಮುಂತಾದ ನಾಯಕರು ಕಾಂಗ್ರೆಸ್‌ನ್ನು ಮಂದಗಾಮಿ ಕಾರ್ಯಕ್ರಮಗಳ ಮೂಲಕ ಮುನ್ನಡೆಸಿಕೊಂಡು ಹೋಗುವ ಸ್ಥಿತಿಯಲ್ಲಿರಲಿಲ್ಲ. ಕ್ರಮೇಣ ಕಾಂಗ್ರೆಸ್ಸಿನ ನಾಯಕತ್ವ ಮಂದಗಾಮಿ ಬಣ ದಿಂದ ತಪ್ಪಿಹೋಗುವ ಸಾಧ್ಯತೆಗಳಿದ್ದು, ತಿಲಕರು ಭಾರತೀಯ ಜನತೆಯ ನಿರ್ವಿವಾದ ನಾಯಕರಾಗಿ ಕಂಡು ಬಂದರು. 1915 ರ ಡಿಸೆಂಬರ್ ತಿಂಗಳಲ್ಲಿ ಬಾಂಬೆ ಕಾಂಗ್ರೆಸ್ ಅಧಿವೇಶನದಲ್ಲಿ, ಕಾಂಗ್ರೆಸ್ ಸಂವಿಧಾನಕ್ಕೆ ತಿದ್ದುಪಡಿ ತಂದು, ಮೂಲ ಕಾಂಗ್ರೆಸಿಗೆ ತೀವ್ರಗಾಮಿಗಳು ಸೇರಿಕೊಳ್ಳಲು ಅವಕಾಶ ಕಲ್ಪಿಸಲಾಯಿತು. 1916 ರ ಜನವರಿಯಲ್ಲಿ ಮೂಲ ಕಾಂಗ್ರೆಸ್ ಸಂಸ್ಥೆಯನ್ನು ಸೇರಿಕೊಳ್ಳುವ ತಮ್ಮ ಬಯಕೆಯನ್ನು ತಿಲಕರು ವ್ಯಕ್ತಪಡಿಸಿದರು. 1916 ರ ಡಿಸೆಂಬರ್‌ನಲ್ಲಿ ಲಕ್ನೋದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ತಿಲಕರು ಅವರ ಅನುಯಾಯಿಗಳು ಭಾಗವಹಿಸಿದರು. ಹೀಗೆ ಕಾಂಗ್ರೆಸ್ಸಿನ ಎರಡು ಬಣಗಳು ಮತ್ತೆ ಒಂದಾದವಲ್ಲದೆ, ಭಾರತದ ರಾಷ್ಟ್ರೀಯ



ಚಳುವಳಿ ಹೊಸ ಸ್ವರೂಪ ಪಡೆಯಿತು. ಕಾಂಗ್ರೆಸ್ಸಿನ ಎರಡು ಬಣಗಳು ಒಂದಾದ ನಂತರ, 1920 ರಲ್ಲಿ ತಿಲಕರು ಕಾಲವಾಗುವವರೆಗೂ, ಅವರು ರಾಷ್ಟ್ರೀಯ ಚಳುವಳಿಯ ಅಗ್ರಮಾನ್ಯ ನಾಯಕರಾಗಿ ಉಳಿದರು.

1916 ರ ಲಕ್ನೋ ಕಾಂಗ್ರೆಸ್ ಅಧಿವೇಶನ ಕಾಂಗ್ರೆಸ್ಸಿನ ಮಂದಗಾಮಿಗಳನ್ನು ತೀವ್ರಗಾಮಿಗಳನ್ನು ಒಂದುಗೂಡಿಸಿತಲ್ಲದೆ, ಹಿಂದೂ ಕಾಂಗ್ರಸ್ ಮತ್ತು ಮುಸ್ಲಿಂ ಲೀಗುಗಳು ಒಂದು ಒಪ್ಪಂದ ಮಾಡಿಕೊಂಡು-ಪ್ರಸಿದ್ಧ ಕಾಂಗ್ರೆಸ್-ಲೀಗ್ ಅಥವಾ ಲಕ್ನೋ ಒಪ್ಪಂದ-ದೇಶದ ಹಿತದೃಷ್ಠಿಯಿಂದ ಪರಸ್ಪರ ಸಹಕರಿಸಿ ಕೆಲಸ ಮಾಡಲು ಸಂಕಲ್ಪ ಮಾಡಿಕೊಂಡವು. 1916 ವರ್ಷ ಮತ್ತೊಂದು ದೃಷ್ಟಿಯಿಂದಲೂ ಪ್ರಾಮುಖ್ಯತೆ ಗಳಿಸಿದ ವರ್ಷ. ಆ ವರ್ಷದಲ್ಲಿ, ಬಾಲಗಂಗಾಧರತಿಲಕರು ಮತ್ತು ಶ್ರೀಮತಿ ಆನಿಬೆಸೆಂಟರ ನಾಯಕತ್ವದಲ್ಲಿ ರೂಪುಗೊಂಡ ಎರಡು ಹೋಮ್ ರೂಲ್ ಲೀಗುಗಳು ಭಾರತೀಯ ರಾಷ್ಟ್ರೀಯ ಚಳವಳಿಗೆ ಹೊಸ ಜೀವ ತುಂಬಿದವು.

**ಹೋಮ್ ರೂಲ್ ಚಳವಳಿ:**

ಈಗಾಗಲೇ ಹೇಳಿರುವಂತೆ 1916ರ ವರ್ಷ ಭಾರತದ ರಾಷ್ಟ್ರೀಯ ಚಳುವಳಿಯ ಇತಿಹಾಸದಲ್ಲಿ ಪ್ರಾಮುಖ್ಯತೆ ಪಡೆದ ವರ್ಷವೆನಿಸಿದೆ. 1916 ಲಕ್ನೋ ಕಾಂಗ್ರೆಸ್ ಅಧಿವೇಶನವು ಸ್ವರಾಜ್ಯ ಬೇಡಿಕೆಗೆ ಹೆಚ್ಚು ಒತ್ತು ನೀಡಿತಲ್ಲದೆ, ತೀವ್ರಗಾಮಿಗಳು, ಮಂದಗಾಮಿಗಳು ಮತ್ತೆ ಒಂದುಗೂಡಿದರಲ್ಲದೆ, ಲಕ್ನೋ ಒಪ್ಪಂದದಂತೆ ಕಾಂಗ್ರೆಸ್-ಮುಸ್ಲಿಂ ಲೀಗುಗಳು ಪರಸ್ಪರ ಹೊಂದಾಣಿಕೆಯಿಂದ ಕೆಲಸಮಾಡಲು ನಿರ್ಧರಿಸಿದುವು. 1916 ರ ವರ್ಷವು ಮತ್ತೊಂದು ಕಾರಣಕ್ಕೂ ಪ್ರಮುಖವಾದುದು. ಆ ವರ್ಷದಲ್ಲಿ ಭಾರತ-ಬ್ರಿಟಿಷ್ ಸಂಬಂಧಗಳಲ್ಲಿನ ಸಂಶಯಗಳನ್ನು ಶಾಂತ ಗೊಳಿಸಿ, ಭಾರತೀಯ ರಾಷ್ಟ್ರೀಯ ಚಳುವಳಿಗೆ ಹೊಸ ಚಾಲನ ಶಕ್ತಿ ಒದಗಿಸಿತು. ಭಾರತೀಯ ರಾಷ್ಟ್ರೀಯ ಚಳುವಳಿಯ ಈ ಹೊಸ ಪುನರುತ್ಥಾನದ ನೇತಾರರೆಂದರೆ ಬಾಲಗಂಗಾಧರ್ ತಿಲಕ್ ಮತ್ತು ಶ್ರೀಮತಿ ಆನಿಬೆಸೆಂಟರು. ಅವರಿಬ್ಬರೂ ಪ್ರಾರಂಭಿಸಿದ ಹೊಮ್ ಲೂಲ್ ಚಳವಳಿ ಭಾರತದ ಸ್ವಾತಂತ್ರ ಸಂಗ್ರಾಮಕ್ಕೆ ನೂತನ ಸತ್ವ ಚೈತನ್ಯಗಳನ್ನು ನೀಡಿದವು. ಹೊಂ-ರೂಲ್ ಚಳವಳಿ ಸ್ವಾತಂತ್ರ್ಯ ಹೋರಾಟದ ಮತ್ತೊಂದು ಪ್ರಮುಖವಾದ ಮುಖವೆಂದು ಹೇಳಬಹುದು.

ಬಾಲಗಂಗಾಧರ ತಿಲಕರು ಗಾಂಧಿಪೂರ್ವ ವರ್ಷಗಳ ಕಾಲದ-(Pre-Gandhian era) ಅಗ್ರಮಾನ್ಯ ರಾಷ್ಟ್ರೀಯ ನಾಯಕರೆನಿಸಿಕೊಂಡು ಭಾರತದ ಸ್ವಾತಂತ್ರ ಹೊರಾಟಕ್ಕೆ ಒಂದು ಹೊಸ ತಿರುವು ನಿಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಭಾರತೀಯರಲ್ಲಿ ಹೋರಾಟದ ಮನೋಭಾವನೆಯನ್ನು ಬೆಳೆಸಿ ಜನತೆಯನ್ನು ಸಂಘಟಿಸಿದ್ದು, ಬಾಲಗಂಗಾಧರ ತಿಲಕರು ಭಾರತದ ರಾಷ್ಟ್ರೀಯ ಚಳವಳಿಗೆ ನೀಡಿದ ಅತ್ಯಂತ ಮಹತ್ವದ ಕೊಡುಗೆ ಯಾಗಿದೆ. 'ಸ್ವಾತಂತ್ರ್ಯ ನನ್ನ ಜನ್ಮಸಿದ್ಧ ಹಕ್ಕು. ಅದನ್ನು ಪಡೆದೇ ಪಡೆಯುತ್ತೇನೆ' ಎಂಬ ಅವರ ಪ್ರಸಿದ್ಧ ಘೋಷಣೆ ಭಾರತೀಯರ ನರನಾಡಿಗಳಲ್ಲಿ ಮಾರ್ದನಿಗೊಂಡು ಚಳವಳಿಗಾರರ ಸಂಕಲ್ಪ ಶಕ್ತಿಯನ್ನು ಇಮ್ಮಡಿಗೊಳಿಸಿತು. ಈ ಹಿಂದೆ ಹೇಳಿರುವಂತೆ ಸ್ವರಾಜ್ಯ ಸ್ವದೇಶಿ,





ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು
- ತಿಲಕ್

ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣ ಈ ನಾಲ್ಕು ಅಂಶಗಳ ಕಾರ್ಯಕ್ರಮದ ಮೂಲಕ ರಾಷ್ಟ್ರದ ಸ್ವಾತಂತ್ರ್ಯ ಗಳಿಸಲು ಸಂಕಲ್ಪಿಸಿದರಲ್ಲದೆ, ಅವು 20 ನೇ ಶತಮಾನದ ರಾಷ್ಟ್ರೀಯ ಹೋರಾಟಗಾರರ ಪ್ರಮುಖ ರಾಜಕೀಯ ಅಸ್ತ್ರಗಳಾದುವು. ತಮ್ಮ ಎರಡು ಪ್ರಸಿದ್ದ ಪತ್ರಿಕೆಗಳು- ಕೇಸರಿ ಹಾಗೂ ಮರಾಠ-ಮೂಲಕ ಅನೇಕ ಲೇಖನಗಳನ್ನು ಬರೆದು, ರಾಷ್ಟ್ರೀಯ ಪ್ರಜ್ಞೆಯ ಅರಿವು ಮೂಡಿಸಿ ಜನತೆಯನ್ನು ಸಂಘಟಿಸಿದರು. ನವರಾಷ್ಟ್ರೀಯತೆಯ ತತ್ವವನ್ನು- ತೀವ್ರಗಾಮಿ ರಾಷ್ಟ್ರೀಯತೆ-ರಾಷ್ಟ್ರದಾದ್ಯಂತ ಪ್ರಜ್ವಲಗೊಳ್ಳುವಂತೆ ಮಾಡಿ, ಜನತೆಯ ಹೋರಾಟಕ್ಕೆ ಚಾಲನಶಕ್ತಿ ಒದಗಿಸಿದರು. ತಿಲಕರು ಆರಂಬಿಸಿದ ಹೊಂ-ರೂಲ್ ಚಳವಳಿ ಭಾರತ ರಾಷ್ಟ್ರೀಯತೆಯನ್ನು ಕ್ರಾಂತಿಕಾರಕ ರೀತಿಯಲ್ಲಿ ಮಾರ್ಪಾಟುಗೊಳಿಸಿತು.

ಬಾಲಗಂಗಾಧರ ತಿಲಕರು 1916 ಏಪ್ರಿಲ್ 28 ರಂದು ತಮ್ಮ ಹೊಂ-ರೂಲ್ ಲೀಗನ್ನು ಸ್ಥಾಪಿಸಿದರು. ಜೊಸೆಪ್ ಬಾಪ್ಟಿಸ್ಟ (Joseph Baptista) ಅದರ ಅಧ್ಯಕ್ಷರಾದರೆ, ಎನ್.ಸಿ ಕೇಲ್ಕರ್-(N.C.Kelkar) ಕಾರ್ಯದರ್ಶಿಯಾಗಿ ನೇಮಕಗೊಂಡರು. ಪೂನ ತಿಲಕರ ಹೊಮ್ ರೂಲ್ ಲೀಗಿನ ಕೇಂದ್ರ ಸ್ಥಾನವಾಯಿತು. ಬ್ರಿಟಿಷ್ ಸಾಮ್ರಾಜ್ಯದೊಳಗೆನೇ ಭಾರತಕ್ಕೆ, ರಾಜ್ಯಾಂಗ ಬದ್ದ ಮಾರ್ಗಗಳಿಗನುಸಾರವಾಗಿ ಸ್ವಯಮಾಡಳಿತವನ್ನು ದೊರಕಿಸಿಕೊಡುವುದು ಮತ್ತು ಅದನ್ನು ಗಳಿಸಲು ಜನರಿಗೆ ಅಗತ್ಯವಾದ ಶಿಕ್ಷಣ, ತರಬೇತಿಗಳನ್ನು ನೀಡುವುದು ಹಾಗೂ ಸ್ವಯಮಾಡಳಿತದ ಪರವಾಗಿ ಸಾರ್ವಜನಿಕ ಅಭಿಪ್ರಾಯ ಸಂಘಟಿಸುವುದು ಹೋಮ್ ರೂಲ್ ಲೀಗಿನ ಉದ್ದೇಶಗಳಾಗಿದ್ದುವು. 1916 ರ ಮಧ್ಯ ಭಾಗದ ವೇಳೆಗೆ ತಿಲಕರು ರಾಷ್ಟ್ರದ ಅನೇಕ ಭಾಗಗಳಲ್ಲಿ ಸಂಚರಿಸಿ, ಹೋಮ್ ರೂಲ್ ಚಳವಳಿಯ ಬಗ್ಗೆ ಜನರಿಗೆ ತಿಳಿವಳಿಕೆ ಮೂಡಿಸಲು ವಿದ್ವತ್‌ಪೂರಿತ ಭಾಷಣಗಳನ್ನು ಮಾಡಿದರು. ತಮ್ಮ ಎರಡು ಪತ್ರಿಕೆ-ಕೇಸರಿ ಮರಾಠ-ಗಳ ಮೂಲಕವು ಹೋಮ್ ರೂಲ್ ಚಳವಳಿಯ ಬಗ್ಗೆ ಜನ ಜಾಗ್ರತೆ ಉಂಟುಮಾಡಿದರು. ಭಾರತದ ಎಲ್ಲಿ ರಾಜಕೀಯ ಸಮಸ್ಯೆ, ತೊಂದರಗಳಿಗೆ ಸ್ವಯಮಾಡಳಿತ ವ್ಯವಸ್ಥೆ ಒಂದೇ ಮದ್ದು ಎಂಬುದನ್ನು ಒತ್ತಿ ಹೇಳಿದರು. ತಮ್ಮ ಹೋಮ್ ರೂಲ್ ಲೀಗಿಗೆ ಜನರು ಅಪಾರ ಸಂಖ್ಯೆಯಲ್ಲಿ ಬಂದು ಸೇರಬೇಕೆಂದು ಮನವಿ ಮಾಡಿಕೊಂಡರು. ಹೊರಗಿನ ಕೆಲವೇ ವ್ಯಕ್ತಿಗಳು





ತಮಗಿಷ್ಟ ಬಂದಂತೆ ಭಾರತವನ್ನು ಆಳುತ್ತಿರುವುದನ್ನು ಸಹಿಸಿಕೊಂಡಿರಲು ಸಾಧ್ಯವಿಲ್ಲವೆಂದು ಗುಡುಗಿದರು. ದೇಶಾಭಿಮಾನ, ನಿರ್ಭೀತಿ ಮತ್ತು ತ್ಯಾಗ ಮನೋಭಾವನೆ ಮೈಗೂಡಿಸಿಕೊಂಡು ಸ್ವಾತಂತ್ರ್ಯಗಳಿಸಲು ಕಂಕಣಬದ್ಧರಾಗಬೇಕೆಂದು ಜನರಿಗೆ ಮನವಿ ಮಾಡಿಕೊಂಡರು. ಅವರು ಹೋದಲೆಲ್ಲ, ತಿಲಕರಿಗೆ ಭವ್ಯ ಸ್ವಾಗತ ಸಿಗುತ್ತಿದ್ದು ಒಬ್ಬ ಅತ್ಯಂತ ಜನಪ್ರಿಯ ನಾಯಕರಾಗಿ ಬೆಳೆದರು.

ಹೋಮ್ ರೂಲ್ ಚಳವಳಿಯ ಮತ್ತೊಬ್ಬ ಪ್ರಮುಖ ನಾಯಕರೆಂದರೆ ಶ್ರೀಮತಿ ಆನಿಬೆಸೆಂಟರು. 1847 ರಲ್ಲಿ ಲಂಡನ್ನಿನಲ್ಲಿ ಜನಿಸಿದ ಶ್ರೀಮತಿ ಆನಿಬೆಸಂಟರು ಭಾರತದ ಸ್ವಾತಂತ್ರ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ ಅದ್ವಿತೀಯ ವಿದೇಶಿ ಮಹಿಳೆ. 1889 ರಲ್ಲಿ ( ಮೇಡಮ್ ಬ್ಲವಟ್‌ಸ್ಕಿ ಸ್ಥಾಪಿಸಿದ) ಥಿಯೊಸಾಪಿಕಲ್ ಸೊಸೈಟಿಯನ್ನು ಸೇರಿದ ಶ್ರೀಮತಿ ಆನಿಬೆಸೆಂಟರು 1893 ರಲ್ಲಿ ಭಾರತದಲ್ಲಿ ನೆಲೆಸಿದರು. ಮೇಡಮ್ ಬ್ಲಾವಟ್‌ಸ್ಕಿಯ ಸಾವಿನನಂತರ ಶ್ರೀಮತಿ ಆನಿಬೆಸೆಂಟರೇ ಥಿಯೊಸಾಫಿಕಲ್ ಸೊಸೈಟಿಯ ಅಧ್ಯಕ್ಷರಾದರು. ಭಾರತದಲ್ಲಿ ನೆಲೆಸಿದ ನಂತರ ಭಾರತದ ಪುನರುಜ್ಜೀವನ ಚಳವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು, ರಾಷ್ಟ್ರದ ಸಾಮಾಜಿಕ, ಸಾಂಸ್ಕೃತಿಕ ಶೈಕ್ಷಣಿಕ ಮತ್ತು ರಾಜಕೀಯ ಜೀವನದಲ್ಲಿ ತುಂಬಾ ಮಹತ್ವದ ಪಾತ್ರ ವಹಿಸಿದರು. ಭಾರತೀಯರೊಡನೆ ಸಂಪೂರ್ಣವಾಗಿ ಬೆರೆತು, ತಾನು ಭಾರತೀಯಳೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಸಾಮಾಜಿಕ ಸೇವೆಯಲ್ಲಿ ನಿರತರಾಗಿದ್ದು ವಿಶೇಷರಾಗಿ ಸ್ತ್ರೀ ವಿಮೋಚನೆಗಾಗಿ ಕಂಕಣಬದ್ಧರಾದರು, ಬಾಲ್ಯವಿವಾಹ ಮುಂತಾದ ಸಾಮಾಜಿಕ ಅನಿಷ್ಟಗಳನ್ನು ಖಂಡಿಸಿ ವಿಧವೆಯರ ಸ್ಥಿತಿಗತಿಗಳನ್ನು ಸುಧಾರಿಸಲು ಶ್ರಮಿಸಿದರು. ಭಾರತೀಯ ಸ್ತ್ರೀಯರಿಗೆ ಉತ್ತಮ ಶಿಕ್ಷಣ ನೀಡುವುದರಿಂದ ಭಾರತೀಯ ಸ್ತ್ರೀ ವಿಮೋಚನೆ ಸಾಧ್ಯ ಎಂದು ಶ್ರೀಮತಿ ಬೆನೆಸೆಂಟರು ನಂಬಿದ್ದರು. ಶ್ರೀಮತಿ ಆನಿಬೆಸೆಂಟರು ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಭಾರತೀಯರ ಶೈಕ್ಷಣಿಕ ಪ್ರಗತಿಗೆ ತಮ್ಮದೇ ಆದ ವಿಶಿಷ್ಟ ಕಾಣಿಕೆ ಸಲ್ಲಿಸಿದರು. 1898 ರಲ್ಲಿ ಬನಾರಸ್‌ನಲ್ಲಿ ಆನಿಬೆಸೆಂಟರು ಸ್ಥಾಪಿಸಿದ ಸೆಂಟ್ರಲ್ ಹಿಂದು ಕಾಲೇಜು ಮುಂದೆ ಪ್ರಸಿದ್ಧ ಬನಾರಸ್ ಹಿಂದೂ ವಿಶ್ವವಿದ್ಯಾಲಯವಾಗಿ ಬೆಳೆಯಿತು.

ಶ್ರೀಮತಿ ಆನಿಬೆಸೆಂಟರು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಆ ಕ್ಷೇತ್ರದಲ್ಲಿಯೂ ತಮ್ಮ ಸೇವೆ ಸಲ್ಲಿಸಿದರು. ಭಾರತದ ರಾಜಕೀಯ ವಿಮೋಚನೆ ಆಗದೆ ರಾಷ್ಟ್ರದಲ್ಲಿ ಯಾವುದೇ ಸುಧಾರಣೆ ಸಾಧ್ಯವಿಲ್ಲವೆಂದು ಆಕೆ ತಿಳಿದಿದ್ದರು. ಭಾರತೀಯರ ರಾಷ್ಟ್ರೀಯ ಪ್ರಜ್ಞೆ ದೇಶಾಭಿಮಾನಗಳನ್ನು ಮತ್ತಷ್ಟು ಪ್ರಜ್ವಲ ಗೊಳಿಸುವಲ್ಲಿ ಶ್ರೀಮತಿ ಬೆಸೆಂಟರು ಹೊರಡಿಸಿದ ಎರಡು ಪತ್ರಿಕೆಗಳು - The Commonweal and new India - ಪ್ರಮುಖ ಪಾತ್ರ ವಹಿಸಿದುವು. ತಮ್ಮ ಪತ್ರಿಕೆಗಳಲ್ಲಿ ಧಾರ್ಮಿಕ ಸ್ವಾತಂತ್ರ, ರಾಷ್ಟ್ರೀಯ ಶಿಕ್ಷಣ, ಸಾಮಾಜಿಕ ಮತ್ತು ರಾಜಕೀಯ ಸುಧಾರಣೆಗಳ ಅವಶ್ಯಕತೆಯ ಬಗ್ಗೆ ಬರೆದು ಇಡೀ ರಾಷ್ಟ್ರದ ಗಮನ ಸೆಳೆದರು ಅನಿಬೆಸೆಂಟರು. ಶ್ರೀಮತಿ ಆನಿಬೆಸೆಂಟರು ತಿಲಕ್ ಮತ್ತು ಗೊಪಾಲ ಕೃಷ್ಣ ಗೋಖಲೆಯವರಿಗಿದ್ದ ಭಿನ್ನಾಭಿಪ್ರಾಯ ತೊಡೆದು ಹಾಕಲು ಪ್ರಯತ್ನಿಸಿದರು. ಶ್ರೀಮತಿ ಆನಿಬೆಸೆಂಟರ ಕ್ರಾಂತಿಕಾರಕ ಧೋರಣೆ ಭಾರತೀಯರಲ್ಲಿ ಹೊಸ ಚೈತನ್ಯ ಮೂಡಿಸಿತು. ಸ್ವರಾಜ್ಯ ಸ್ಥಾಪನೆಗಾಗಿ,



ಇಡೀ ರಾಷ್ಟ್ರದಲ್ಲಿ ಆಕೆ ಕೈಗೊಂಡ ಪ್ರಚಾರ ಕಾರ್ಯ ಭಾರತವನ್ನು ನಿದ್ದೆಯಿಂದೆಬ್ಬಿಸಿತು.

1915 ರ ಬಾಂಬೆ ಕಾಂಗ್ರೆಸ್ ಅಧಿವೇಶನದಲ್ಲಿ ಶ್ರೀಮತಿ ಆನಿಬೆಸೆಂಟರು ತಮ್ಮ ಹೊಮ್ ರೂಲ್ ಚಳವಳಿಯ ಬಗ್ಗೆ ಒಂದು ನಿರ್ಣಯ ಮಂಡಿಸಿದರು, ಆದರೆ ಮಂದಗಾಮಿಗಳಿಂದ ಅದಕ್ಕೆ ಯಾವ ಸಹಕಾರವೂ ದೊರೆಯಲಿಲ್ಲ. 1916 ರ ಸೆಪ್ಟೆಂಬರ್‌ನಲ್ಲಿ ಶ್ರೀಮತಿ ಆನಿಬೆಸೆಂಟರು ತಮ್ಮ ಹೊಮ್ ರೂಲ್ ಲೀಗನ್ನು ಮದರಾಸಿನ ಬಳಿಯ ಅಡಿಯಾರ್‌ನಲ್ಲಿ ಸ್ಥಾಪಿಸಿದರು. ಬಹು ಬೇಗ ಅದರ ಶಾಖೆಗಳು ಬಾಂಬೆ, ಕಾನ್ಪುರ, ಅಲಹಾಬಾದ್, ಬನಾರಸ್, ಮಥುರ, ಅಹಮದ್ ನಗರ, ಕ್ಯಾಲಿಕಟ್, ಮದ್ರಾಸ್ ಮುಂತಾದೆಡೆ ಸ್ಥಾಪನೆ ಆದವು. ಬಾಲಗಂಗಾಧರ ತಿಲಕರಂತೆ ಶ್ರೀಮತಿ ಆನಿಬೆಸೆಂಟರೂ ಸಹ ಭಾರತದಾದ್ಯಂತ ಬಿರುಸಿನ ಪ್ರಚಾರ ಕಾರ್ಯವನ್ನಾರಂಭಿಸಿದರು. ಹೋಮ್ ರೂಲ್ ಚಳವಳಿಯ ಬಗ್ಗೆ ಭಾವೋದ್ರೇಕದ ಭಾಷಣಗಳನ್ನು ಮಾಡಿ ಜನರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದರು. ನಿದ್ರಿಸುತ್ತಿರುವ ಭಾರತೀಯರನ್ನು ಎಚ್ಚರಗೊಳಿಸಿ ಅವರು ತಮ್ಮ ಮಾತೃ ಭೂಮಿಗಾಗಿ ದುಡಿಯುವಂತೆ ಮಾಡುವ ಒಂದು ಭಾರತೀಯ ಟಾಂ ಟಾಂ ಆಗಿದ್ದೇನೆ ನಾನು ಎಂದು ಅವರು ಹೇಳಿದರು. ಶ್ರೀಮತಿ ಆನಿಬೆಸೆಂಟರು ವಿಶೇಷವಾಗಿ ಶೌರ್ಯ, ಸಹನೆ, ತ್ಯಾಗಕ್ಕೆ ಹೆಸರಾಗಿದ್ದ ಭಾರತೀಯ ಮಹಿಳೆಯರಲ್ಲಿ ಅತ್ಮವಿಶ್ವಾಸ ಮೂಡಿಸಿ ಅವರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸಿದ್ದಗೊಳಿಸುವಲ್ಲಿ ತುಂಬಾ ಶ್ರದ್ದೆಯಿಂದ ಶ್ರಮಿಸಿ ಯಶಸ್ವಿಯಾದರು.

1916 ಮತ್ತು 1917 ರಲ್ಲಿ ಬಾಲಗಂಗಾಧರ ತಿಲಕರು ಮತ್ತು ಶ್ರೀಮತಿ ಆನಿಬೆಸೆಂಟರು ತಮ್ಮ ತಮ್ಮ ಹೋಮ್ ರೂಲ್ ಲೀಗುಗಳ ಮೂಲಕ ಪರಸ್ಪರ ಸಹಕಾರ ಹೊಂದಾಣಿಕೆಗಳಿಂದ ಕೆಲಸ ಮಾಡಿದರು. ಇವರಿಬ್ಬರ ಪರಿಶ್ರಮದಿಂದಾಗಿ ಹೋಮ್ ರೂಲ್ ಚಳವಳಿ ಬಹುಬೇಗ ದೇಶದ ಮೂಲೆ ಮೂಲೆಗಳಿಗೆ ವ್ಯಾಪಿಸಿತು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಹೋಮ್ ರೂಲ್ ಲೀಗಿನ ಸದಸ್ಯರಾಗಿ ಅದರ ಸಂಖ್ಯಾಬಲ ಮತ್ತು ಹೋರಾಟದ ಸತ್ವವನ್ನು ಹೆಚ್ಚಿಸಿದರು. ಅವರಿಬ್ಬರೂ ಒಂದು ಹೊಸ ಭಾವನೆ ಮತ್ತು ಸಂಸ್ಥೆಯ ಮೂಲಕ ಇಡೀ ರಾಷ್ಟ್ರವನ್ನು ಎಚ್ಚರ ಗೊಳಿಸಿದರು. ಹೊಂ ರೂಲ್ ಚಳವಳಿಯ ಸಂದೇಶ ಭಾರತೀಯರ ಬದುಕಿನ ಒಂದು ಅಂಗವಾಗಿ ಬೆಳೆಯಿತು. ಅವರಿಬ್ಬರೂ ಭಾರತೀಯ ರಾಷ್ಟ್ರೀಯತೆಯನ್ನು ಕ್ರಾಂತಿಕಾರಕ ರೀತಿಯಲ್ಲಿ ಮಾರ್ಪಾಟುಗೊಳಿಸಿ, ಸುಮಾರು ಮೂವತ್ತೇಳು ವರ್ಷಗಳ ನಂತರ ಭಾರತ ಸ್ವತಂತ್ರವಾಗಲು ಭದ್ರ ಬುನಾದಿ ಹಾಕಿದರು.

ಹೋಮ್ ರೂಲ್ ಚಳವಳಿಯ ವ್ಯಾಪಕತೆ, ಅದರ ತೀವ್ರತೆಯನ್ನು ಗಮನಿಸಿದ ಸರ್ಕಾರ ಚಳವಳಿಗಾರರ ಮೇಲೆ ಉಗ್ರಕ್ರಮ ಜರುಗಿಸಿತು. ಹೋಮ್ ರೂಲ್ ಲೀಗಿನ ಸದಸ್ಯರು ನಡೆಸುತ್ತಿದ್ದ ಪ್ರಚಾರ ಕಾರ್ಯ ನಿಲ್ಲಿಸಲು 1910 ಇಂಡಿಯಾ ಪ್ರಸ್ ಮಸೂದೆಯ ನಿಬಂಧನೆಗಳನ್ನು ಕಡ್ಡಾಯವಾಗಿ ಜಾರಿಗೊಳಿಸಲಾಯಿತು. ಶಾಲಾ ಕಾಲೇಜಿನ ವಿದ್ಯಾರ್ಥಿಗಳು ಹೋಮ್ ರೂಲ್ ಚಳವಳಿಯಲ್ಲಿ ಭಾಗವಹಿಸದಂತೆ ನಿಷೇಧ ಹೇರಲಾಯಿತು. ಬ್ರಿಟಿಷ್ ಸರ್ಕಾರದ ವಿರುದ್ದ ಪಿತೂರಿ ನಡೆಸಿ ಉದ್ರೇಕಕಾರಿ ಭಾಷಣಗಳಿಂದ ಜನತೆಯನ್ನು ಪ್ರಚೋದಿಸುತ್ತಿದ್ದಾರೆಂದು ಆಪಾದಿಸಿ ತಿಲಕರು 20,000 ಸಹಸ್ರ



ರೂಪಾಯಿಗಳ ವಯಕ್ತಿಕ ಮುಚ್ಚಳಿಕೆ ಪತ್ರ ನೀಡಬೇಕೆಂದು ಆದೇಶ ಹೊರಡಿಸಲಾಯಿತು. ಬಾಲಗಂಗಾಧರ ತಿಲಕರ ಲೇಖನ, ಭಾಷಣಗಳ ಮೇಲೆ ನಿರ್ಬಂಧಗಳನ್ನು ಹಾಕಿತು. ತಿಲಕರ ಬಂಧನಕ್ಕೆ ಆದೇಶ ಹೊರಡಿಸಿ, ಅವರು ದೆಹಲಿ ಪಂಜಾಬುಗಳಿಗೆ ಪ್ರವೇಶಿಸುವುದನ್ನು ನಿಷೇಧಿಸಲಾಯಿತು. ಶ್ರೀಮತಿ ಆನಿಬೆಸೆಂಟರ ವಿರುದ್ಧವೂ ಅದೇ ರೀತಿಯ ಕ್ರಮ ಜರುಗಿಸಲಾಯಿತು. ಆಗಿನ ಮದರಾಸಿನ ಸರ್ಕಾರ ಜೂನ್ 15, 1917 ರಂದು ಆದೇಶ ಹೊರಡಿಸಿ ಶ್ರೀಮತಿ ಆನಿಬೆಸೆಂಟ್ ಮತ್ತು ಅವರ ಸಹೋದ್ಯೋಗಿಗಳಾದ ಬಿ.ಪಿ. ವಾಡಿಯಾ, ಜಾರ್ಜ್ ಅರುಂಡೇಲ್ ಅವರುಗಳನ್ನು ಸಹ ಬಂಧಿಸಿತು. ಅವರುಗಳ ಬಂಧನದಿಂದ ರಾಷ್ಟ್ರದಾದ್ಯಂತ ಉಗ್ರ ಪ್ರತಿಭಟನೆಗಳು ನಡೆದವು. ದೇಶದ ನಾನಾ ಕಡೆಗಳಲ್ಲಿ ರಾಜಕೀಯ ನಾಯಕರು ಕಾಂಗ್ರೆಸ್ ಮುಖಂಡರುಗಳು ಹೊಮ್ ರೂಲ್ ಚಳವಳಿಗೆ ಬೆಂಬಲ ವ್ಯಕ್ತ ಪಡಿಸಿ ಹೋಮ್ ರೂಲ್ ಲೀಗನ್ನು ಸೇರಿದರು. ಬಂಧನಕ್ಕೊಳಗಾದವರಿಗೆ ತಮ್ಮ ಬೆಂಬಲ ಸೂಚಿಸಲು ಸರ್ಕಾರದ ಕ್ರಮಗಳನ್ನು ಖಂಡಿಸಲು ಮದನ್ ಮೋಹನ್ ಮಾಳವೀಯ, ಸುರೇಂದ್ರ ನಾಥ ಬ್ಯಾನರ್ಜಿ ಮುಂತಾದ ಸೌಮ್ಯವಾದಿ ನಾಯಕರು ಹಾಗೂ ಮಹಮ್ಮದ್ ಅಲಿ ಜಿನ್ನ ಇವರುಗಳು ಹೋಮ್ ರೂಲ್ ಲೀಗನ್ನು ಸೇರಿದರು. ಹೋಮ್ ರೂಲ್ ಅಥವಾ ಸ್ವಯಂ ಆಡಳಿತವನ್ನು ಭಾರತದಲ್ಲಿ ಜಾರಿಗೆ ತರುವಂತೆ ಸರ್ಕಾರವನ್ನು ಒತ್ತಾಯಿಸಲು ರೈತರು, ಕಾರ್ಮಿಕರು ಮುಂತಾದವರ ಒಂದು ಲಕ್ಷ ಸಹಿ ಸಂಗ್ರಹಣೆ ಕಾರ್ಯದಲ್ಲಿ ತೊಡಗಿದರು ಚಳವಳಿಗಾರರು. ಸರ್ಕಾರ ಚಳವಳಿಯನ್ನು ಹತ್ತಿಕ್ಕಲು ಬಿಗಿ ಕ್ರಮ ತೆಗೆದುಕೊಂಡಷ್ಟು ಹೋಮ್ ರೂಲ್ ಚಳವಳಿಗಾರರು, ಸರ್ಕಾರದ ಕ್ರಮಗಳನ್ನು ವಿರೋದಿಸಲು ತಮ್ಮ ಹೋರಾಟವನ್ನು ಮತ್ತಷ್ಟು ತೀವ್ರಗೊಳಿಸಿದರು.

ಹೊಮ್ ರೂಲ್ ಚಳವಳಿಯಿಂದ ಉಂಟಾದ ಗಂಭೀರ ಪರಿಸ್ಥಿತಿಯನ್ನು ತಿಳಿಗೊಳಿಸಲು ಚಳವಳಿಗಾರರನ್ನುತೃಪ್ತಿಪಡಿಸಲು ಬ್ರಿಟಿಷ್ ಸರ್ಕಾರ ತನ್ನ ನೀತಿ ದೋರಣೆಗಳನ್ನು ಬದಲಾಯಿಸಿಕೊಳ್ಳ ಬೇಕಾಯಿತು. ಭಾರತದ ಹೊಸ ಸ್ಟೇಟ್ ಸೆಕ್ರೆಟರಿ ಆಗಿ ನೇಮಕಗೊಂಜಾ ಲಾರ್ಡ್ ಮಾಂಟಿಗೂ ಆಗಸ್ಟ 20,1917 ರಂದು ಕಾಮನ್ಸ್ ಸಭೆಯಲ್ಲಿ ಒಂದು ಪ್ರಮುಖ ಪ್ರಕಟಣೆಮಾಡಿದ. ಆ ಪ್ರಕಟಣೆಯ ಸಾರಾಂಶವೆಂದರೆ ಆಡಳಿತದ ಎಲ್ಲಹಂತಗಳಲ್ಲಿ ಭಾರತೀಯರು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಳ್ಳುವಂತೆ ಮಾಡುವುದು, ಹಾಗೂ ಬ್ರಿಟಿಷ್ ಸಾಮ್ರಾಜ್ಯದ ಅಂಗವಾಗಿ ಕ್ರಮೇಣ ಸ್ವಯಂ ಆಡಳಿತ ಸಂಸ್ಥೆಗಳನ್ನು ಅಭಿವೃದ್ಧಿಗೊಳಿಸುವ ಮೂಲಕ ಭಾರತದಲ್ಲಿ ಜವಬ್ದಾರಿ ಸರ್ಕಾರ ಸ್ಥಾಪಿಸುವುದು, ಬ್ರಟಿಷ್ ಸರ್ಕಾರದ ಗುರಿ ಎಂಬುದಾಗಿತ್ತು ಈ ಪ್ರಕಟಣೆಯಂತೆ ಕೆಲವು ಸುಧಾರಣೆಗಳನ್ನು ಜಾರಿಗೆತರುವಪ್ರಯತ್ನ ಮಾಡಲಾಯಿತಾದರೂ ಭಾರತದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆ ಆಗ ಆಗಲಿಲ್ಲ. ಆದರೂ ಮಾಂಟಿಗೂ ಹೊರಡಿಸಿದ ಪ್ರಕಟಣೆಯ ಒಂದು ಒಳ್ಳೆಯ ಅಂಶವೆಂದರೆ ಹೋಂರೂಲ್ಅಥವಾ ಸ್ವಯಂ ಆಡಳಿತದ ಭಾರತೀಯರ ಬೇಡಿಕೆಯನ್ನು ಇನ್ನುಮುಂದೆ ರಾಜ ದ್ರೋಹವಂದು ಪರಿಗಣಿಸದೇ ಇದ್ದುದು ಈ ಪ್ರಕಟಣೆಯಿಂದ ಭಾರತೀಯರು ತುಷ್ಟಿಗೊಳ್ಳುವುರೆಂದು ಬ್ರಿಟಿಶ್ ಸರ್ಕಾರ ಭಾವಿಸಿತ್ತು. ಅದೇರೀತಿ ಜನತೆಯ ಬೇಡಿಕೆಗನುಸಾರವಾಗಿ 1917ರ ಸೆ ಪ್ಟಂಬರ್ ನಲ್ಲಿ ಶ್ರೀಮತಿ ಆನಿಬೆಸೆಂಟರನ್ನು



HEALTH CELL

ಬಂಧನದಿಂದ ಬಿಟುಗಡೆ ಮಾಡಲಾಯಿತು. ಆ ವೇಳೆಗೆ ಶ್ರೀಮತಿ ಆನಿಬೆಸೆಂಟರುಭಾರತೀಯರ ಒಬ್ಬ ಜನಾನುರಾಗಿ ನಾಯಕರಾಗಿ ಬೆಳೆದಿದ್ದರಲ್ಲದೆ, ಬಾಲಗಂಗಾಧರ ತಿಲಕರ ಸಲಹೆಯಂತೆ 1917 ರ ಡಿಸೆಂಬರ್‌ನಲ್ಲಿ ನಡೆದ ಕಾಂಗ್ರಸ್ಸಿನ ವಾರ್ಷಿಕ ಅಧಿವೇಶನದ ಅಧ್ಯಕ್ಷಿಣಿಯಾಗಿಯೂ ಆರಿಸಲಾಯಿತು.

1917ರಲ್ಲಿ ಹೊಮ್ ರೂಲ್ ಚಳವಳಿ ಗಳಿಸಿದ ಪ್ರಭಾವ ಪ್ರಗತಿಗಳು ಕ್ರಮೇಣ ಕಡಿಮೆ ಆಗುತ್ತಾಬಂದವು. ಅದಕ್ಕೆ ಕೆಲವಾರು ಅಂಶಗಳು ಕಾರಣವಾಗಿದ್ದುವು. ಬ್ರಿಟೀಷರು ಹೊಸರಾಜಕೀಯ ಸುಧಾರಣೆಗಳ ಬಗ್ಗೆ ನೀಡಿದ ಆಶ್ವಾಸನೆ ಹಾಗೂ ಶ್ರೀಮತಿ ಆನಿಬೆಸೆಂಟರ ಬಿಡುಗಡೆಯಿಂದಾಗಿ, ಹೊಮ್ ರೂಲ್ ಚಳವಳಿಯಲ್ಲಿ ಪಾಲ್ಗೊಂಡಿದ್ದ ಕಾಂಗ್ರೆಸ್ಸಿನ ಸೌಮ್ಯವಾದಿಗಳ ಸಂತೃಪ್ತರಾದಂತೆ ಕಂಡು ಬಂದರು 1918ರ ಕೊನೆಯಲ್ಲಿ ಬಾಲಗಂಗಾಧರ ತಿಲಕರು ಇಂಗ್ಲೆಂಡಿಗೆ ಹೊಗಬೇಕಾಗಿ ಬಂದದ್ದರಿಂದ ಮತ್ತು ಶ್ರೀಮತಿ ಆನಿಬೆಸೆಂಟರು ಚಳವಳಿಯನ್ನು ಪರಿಣಾಮಕಾರಿಯಾಗಿ ಮುನ್ನಡೆಸುವ ಸ್ಥಿತಿಯಲ್ಲಿದ್ದರಿಂದ ಹೊಮ್ ರೂಲ್ ಚಳವಳಿ ತನಗೆ ತಾನೇ ಕಡಿಮೆಯಾತ್ತ ಬಂದಿತು. ಆದರೂ ಹೊಮ್ ರೂಲ್ ಚಳವಳಿ, ಭಾರತದ ರಾಷ್ಟ್ರೀಯ ಚಳವಳಿಯ ಒಂದು ಅತ್ಯಂತ ಮಹತ್ವದ ಘಟ್ಟವಾಗಿ ಉಳಿದಿದೆ. ಏಕೆಂದರೆ ಹೊಮ್ ಲೂಲ್ ಚಳವಳಿ ಹೆಚ್ಚು ಉತ್ಸಾಹದ ಹುರುಪಿನಿಂದ ಕೂಡಿದ ರಾಷ್ಟ್ರೀಯ ವಾದಿಗಳ ಒಂದು ಹೊಸ ಪೀಳಿಗೆಯನ್ನು ಸೃಷ್ಟಿಸಿ ಮುಂದಿನ ಸ್ವಾತಂತ್ರ ಸಂಗ್ರಾಮಕ್ಕೆ ದೊಡ್ಡ ತಿರುವು ನೀಡಿತು. ಹೊಮ್ ರೂಲ್ ಚಳವಳಿ ಜನತೆಯ ರಾಷ್ಟ್ರೀಯ ಭಾವನೆ, ಆಶೊತ್ತರಗಳನ್ನು ಕೆರಳಿಸಿ, ಮುಂದೆ ಭಾರತದ ಸ್ವಾತಂತ್ರ ಹೊರಾಟ, ಗಾಂಧೀಜಿಯವರ ನಾಯಕತ್ವದಲ್ಲಿ ಒಂದು ಜನಾಂದೊಳನವಾಗಿ ಬೆಳೆಯಲು ತಕ್ಕ ಭೂ ಮಿಕೆಯನ್ನು ಸಿದ್ಧ ಗೊಳಿಸಿತು.

1914-1918 ಪ್ರಪಂಚದ ಮೊದಲನೇ ಮಹಾಯುದ್ಧ ಭಾರತದ ಸ್ವಾತಂತ್ರ್ಯ ಹೋರಾಟದ ಗತಿಯನ್ನೆ ಬದಲಾಯಿಸಿತೆಂದು ಹೇಳಬಹುದು. ಭಾರತದ ರಾಷ್ಟ್ರೀಯ ವಾದಿಗಳ ಚಳವಳಿಗಾರರು ಮತ್ತಷ್ಟು ಜೈತನ್ಯ ಸ್ಪೂರ್ತಿಗಳಿಂದ ತಮ್ಮ ಹೊರಾಟವನ್ನು ಮುಂದುವರೆಸಲು ಸಾಧ್ಯವಾಯಿತು. ಭಾರತ ಬ್ರಿಟೀಷ್ ಸಾಮ್ರಜ್ಯದ ಒಂದು ಭಾಗವಾದ್ದರಿಂದ ಭಾರತೀಯರೂ ಸಹ ಯುದ್ಧದಲ್ಲಿ ಭಾಗವಹಿಸ ಬೇಕಾಯಿತು. ಬ್ರಿಟೀಷರ ಬಗ್ಗೆ ನಿಜವಾದ ನಿಷ್ಠೆ ಹೊಂದಿರದಿದ್ದರೂ, ಸ್ವಯಮಾಡಳಿತ ಮತ್ತು ಪ್ರಜಾಪ್ರಭುತ್ವ ವಾವಸ್ಥೆಯನ್ನು ದೇಶದಲ್ಲಿ ಜಾರಿಗೆ ಬರುವಂತೆ ಮಾಡಲು ಇದೊಂದುಒಳ್ಳೆಯ ಅವಕಾಶವೆಂದು ಭಾರತೀಯರು ಭಾವಿಸಿದ್ದರು. ಅಲ್ಲದೆ, ಶಾಂತಿ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ಸ್ವಯಮ್ ನಿರ್ಧಾರದ ಹಕ್ಕುಗಳನ್ನು ಪ್ರಪಂಚ ದಾದ್ಯಂತ ನೆಲೆಗೊಳಿಸುವ ಉದ್ದೇಶ ದಿಂದ ಈ ಯೂದ್ದ ಮಾಡುತ್ತಿದ್ದೇವೆ ಎಂಬ ಮಿತ್ರರಾಷ್ಟಗಳುಹಾಗೂ ಅಮೆರಿಕಾಗಳು ಹೊರಡಿಸಿದ ಘೋಷಣೆ,ಭಾರತೀಯ ರಾಷ್ಟ್ರೀಯ ವಾಧಿಗಳಿಗೆ ಹೊರಾಟಗಾರರಿಗೆ ಅತಿಹೆಚ್ಚಿನ ಸ್ಪೂರ್ತಿ ಒದಗಿಸಿತು.

ಯುದ್ಧದ ಸಮಯದಲ್ಲಿ ಭಾರತೀಯ ಸೈನಿಕರು, ಫ್ರಾನ್ಸ್, ಮಾಸಿಡೊನಿಯಾ, ತುರ್ಕಿ, ಆಫ್ರಿಕಾ ಮುಂತಾದ ಯುದ್ದವಲಯಗಳಲ್ಲಿ ತಮ್ಮ ಧೈರ್ಯ ಸಾಹಸಗಳನ್ನು ಘತ್ತಮ ರೀತಿಯಲ್ಲಿ ಪ್ರದರ್ಶಿಸಿ ಬ್ರಿಟಿಷ್ ಸಾಮ್ರಜ್ಯಕ್ಕೆ ಅತ್ಯಮೂಲ್ಯ ಸೇವೆ ಸಲ್ಲಿಸಿದರು. ಯುದ್ದದಲ್ಲಿ ನೇರವಾಗಿ ಭಾಗವಹಿಸಿದ್ದರಿಂದ





ಭಾರತೀಯರ ಆತ್ಮ ವಿಶ್ವಾಸ ಹೆಚ್ಚಾಯಿತಲ್ಲದೆ, ಭಾರತೀಯ ಸೈನಿಕರ ಪ್ರಯತ್ನದ ಪ್ರಮಾಣವನ್ನು ಗಮನಿಸಿದಾಗ, ಬ್ರಿಟೀಷರು ಯುದ್ಧದಲ್ಲಿ ಎಷ್ಟರ ವಟ್ಟಿಗೆ ಭಾರತೀಯ ಸೈನಿಕರನ್ನು ಅವಲಂಬಿಸಿದ್ದರೆಂದು ತಿಳಿಯುವುದು. ಯುದ್ಧದ ಸಮಯದಲ್ಲಿ ಜರುಗಿದ ಎರಡು ಮಹತ್ವದ ಘಟನೆಗಳು ಸಹ ಭಾರತೀಯ ರಾಷ್ಟ್ರೀಯ ಚಳವಖಳಿಯ ಮೇಲೆ ಮಹತ್ತರ ಪರಿಣಾಮ ಬೀರಿದವು. ರಷ್ಯದಲ್ಲಿ ನಡೆದ 1917 ರ ಕಮ್ಯುನಿಸ್ಟ್ ಕ್ರಾಂತಿಯಿಂದಾಗಿ, ಅಲ್ಲಿನ ಪ್ರಭುತ್ವ ನುಚ್ಚು ನೂರಾದಂತೆ ಭಾರತದಲ್ಲಿಯೂ ಬ್ರಿಟೀಷ್‌ರ ಪ್ರಭುತ್ವನಾಶಹೊಂದ ಬಹುದೆಂದು ಭಾರತೀಯ ರಾಷ್ಟ್ರೀಯ ಚಳವಳಿಗಾರರು ಭಾವಿಸಿದರು. ಅದೇ ರೀತಿ 1917ರ ಸುಮಾರಿಗೆ ಅಮೆರಿಕ ಮೊದಲು ಮಹಾಯುದ್ಧದಲ್ಲಿ ಪ್ರವೇಶಮಾಡಿದ ಘಟನೆಯಾ ಸಹ ತನ್ನದೇ ಆದ ರೀತಿಯಲ್ಲಿ ಭಾರತೀಯ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಶಕ್ತಿಯನ್ನುಒದಗಿಸಿತು. ರಾಷ್ಟ್ರೀಯ ಸ್ವಾತಂತ್ರ್ಯ ಸ್ವಯಮ್‌ನಿರ್ಧಾರದ ಹಕ್ಕು ಮುಂತಾದ ತತ್ವಗಳನ್ನು ಒಳಗೊಂಡಿದ್ದ ಅಮೆರಿಕದ ಅಧ್ಯಕ್ಷ ವುಡ್ರೋ ವಿಲ್ಸನ್ನನ ಪ್ರಸಿದ್ಧ ಹದಿನಾಲ್ಕು ಅಂಶಗಳ ಘೋಶಣೆ ಶೋಷಣೆ ಮತ್ತು ದಮನಕಾರಿ ನೀತಿಗೆ ಗುರಿಯಾಗಿದ್ದ ಭಾರತೀಯರಿಗೆ ಬಹುದೊಡ್ಡ ಆಶಾಕಿರಣವಾಯಿತು. ಈ ಎರಡು ಘಟನೆಗಳು, ಸ್ವಯಮಾಡಳಿತಕ್ಕೆ ತೀವ್ರರೀತಿಯ ಹೊರಾಟ ನಡೆಸಲು, ಭಾರತೀಯ ರಾಷ್ಟ್ರೀಯ ಹೊರಾಟಗಾರರನ್ನು ಹುರುದುಂಬಿಸಿದವು.

ಪ್ರಪಂಚದ ಮೊದಲನೇ ಮಹಾಯುದ್ಧವು ಕಾಂಗ್ರೆಸ್ ಪಕ್ಷವನ್ನು ರೂಪಾಂತರಗೊಳಿಸಿತು. ಭಾರತೀಯ ರಾಷ್ಟ್ರೀಯತೆ 1900ರಲ್ಲಿ ಮಧ್ಯಮ ವರ್ಗದ ಬುದ್ದಿ ಜೀವಿಗಳಿಗೆ ಮಾತ್ರ ಸೀಮಿತವಾಗಿದ್ದ ಒಂದು ಪ್ರವೃತಿಯಾಗಿತ್ತೇ ಹೊರತು, ಅದು ವ್ಯವಸ್ಥಿತವಾದ ರಾಜಕೀಯ ಚಳವಳಿ ಯಾಗಿರಲಿಲ್ಲ. ಮೊದಲನೇ ಮಹಾಯುದ್ದ ಚಳವಳಿಯನ್ನು ಸಂಘಟಿಸಿತು. ಲೊಕಮಾನ್ಯ ಬಾಲಗಂಗಾಧರ ತಿಲಕರ ನಾಯಕತ್ವದಲ್ಲಿ ಕಾಂಗ್ರಸ್ ಅನ್ನು ಸಂಘಟಿಸಲಾಯಿತಲ್ಲದೆ 1916 ವೇಳೆಗೆ ಹೊಸ ಚಳವಳಿ-ಹೊಮ್ ರೂಲ್ ಚಳವಳಿ-ಯನ್ನು ಆರಂಭಿಸಲಾಯಿತು. 1916ರ ನಂತರ ಕಾಂಗ್ರಸ್ ಸ್ವಯಮಾಡಳಿತಕ್ಕೆ ಬದ್ದವಾಗಿದ್ದು ಅದನ್ನು ಆದಷ್ಟು ಬೇಗ ಪಡೆಯಲು ನಿರ್ಧರಿಸಿತು. ಅಲ್ಲದೆಮಹಾತ್ಮಗಾಂಧೀಜಿಯವರ ನಾಯಕತ್ವದಲ್ಲಿ ಬ್ರಿಟಿಷ್ ವಿರೊದಿ ಚಳವಳಿ ಸತ್ವಯುತವಾಗಿ ಮುಂದೆ ನಡೆಯಲು ಅಗತ್ಯವಾದ ಭೂಮಿಕೆಯನ್ನು ಸಿದ್ದಗೊಳಿಸಲು ಪ್ರಯತ್ನಗಳು ನಡೆದವು

ಮೊದಲನೇ ಮಹಾಯುದ್ದವು ಭಾರತೀಯ ಮುಸ್ಲಿಂ ಜನಾಂಗದ ಮೇಲೂ ತನ್ನ ಪ್ರಭಾವ ಬೀರಿತು ಮೊದಲನೇ ಮಹಾ ಯುದ್ಧದಲ್ಲಿ ತುರ್ಕಿ ಪರಾಭವಗೊಂಡಿದ್ದು, ತುರ್ಕಿಯ ಸಾಮ್ರಜ್ಯ ನಾಕವಾದದ್ದು ಭಾರತೀಯ ಮುಸ್ಲಿಮ್ ಸಮುದಾಯಕ್ಕೆ ಒಂದು ರೀತಿಯ ಆಘಾತವುಂಟುಮಾಡಿತು. ತುರ್ಕಿಯ ಸುಲ್ತಾನನ್ನು, ಇಡೀ ಮುಸ್ಲಿಮ್ ಜನಾಂಗದ ರಾಜಕೀಯ, ಆಧ್ಯಾತ್ಮಿಕ ನಾಯಕನೆಂದು ಪರಿಗಣುಸಿದ್ದ ಮುಸ್ಲಿಮ್ ಜನಸಾಮಾನ್ಯರು ಬ್ರಿಟೀಷರೇ ತುರ್ಕಿ ಸಾಮಾಜ್ಯದ ಅಳಿವಿಗೆಮತ್ತು ಸುಲ್ತಾನನ ಅವಹೇಳನಕ್ಕೆ ಕಾರಣರೆಂದು ಭಾವಿಸಿ ತಮ್ಮ ಆಕ್ರೋಶವ್ಯಕ್ತಪಡಿಸಿದರು. 1916 ಮತ್ತು 1922 ರಲ್ಲಿ ಮುಸ್ಲಿಮರು ಹಿಂದೂಗಳೊಡನೆ ಬೆರೆತು ತಾತ್ಕಾಲಿಕವಾಗಿಯಾದರೂ ರಾಷ್ಟ್ರೀಯ ಸ್ವಾತಂತ್ರ್ಯದಲ್ಲಿ ಆಸಕ್ತಿ ವಹಿಸಿದರು.



1916 ಲಕ್ನೋ ಒಪ್ಪಂದ, 1919ರ ಖಿಲಾಫತ್‌ಚಳವಳಿ ಮತ್ತು 1920-1922ರ ಅಸಹಕಾರ ಚಳವಳಿಯ ಸಮಯದಲ್ಲಿ ಹಿಂದೂ-ಮುಸ್ಲಿಮ್ ಸಹಕಾರ ಇವೆಲ್ಲವೂ ಮೊದಲನೇ ಮಹಾಯುದ್ಧದ ನೇರ ಪರಿಣಾಮಗಳಾಗಿದ್ದುವು. ಭಾರತೀಯ ಮುಸ್ಲಿಮ್ ಸಮುದಾಯದ ಮೇಲೆ.

**ಮಾಂಟೆಗೊ ಚಲ್ಮಸ್ ಫರ್ಡ್ ಸುಧಾರಣೆಗಳು:**

ಭಾರತೀಯ ರಾಷ್ಟ್ರೀಯ ಚಳವಳಿಯ ತೀವ್ರತೆ-ಬಾಲಗಂಗಾಧರ ತಿಲಕ್ ಮತ್ತು ಶ್ರೀಮತಿ ಆನಿಬೆಸೆಂಟರ ಹೊಮ್ ರೂಲ್ ಚಳವಳಿ,ಭಾರತೀಯ ಮುಸ್ಲಿಮರ ಅಸಮಾದಾನ ಆಕ್ರೋಶಗಳ ಕಾಂಗ್ರೆಸ್-ಮುಸ್ಲಿಮ್ ಲೀಗ್ ಗಳ ಐಕ್ಯತೆ ಇವೆಲ್ಲವೂ ಬ್ರಿಟೀಷರಿಗೆ ಆತಂಕ ಉಂಟುವಾಡಿದವು. ಇಂಗ್ಲಡಿನ ಪ್ರಧಾನ ಮಂತ್ರಿ ಲಾಯ್ಡಜಾರ್ಜ ಭಾರತದಲ್ಲಿನ ಗಂಭೀರ ಪರಿಸ್ಥತಿಯನ್ನು ಮನಗಂಡು, ಪರಿಸ್ಥಿತಿಯನ್ನು ಸುದಾರಿಸುವ ಉದ್ದೇಶದಿಂದ ಲಾರ್ಡ್‌ಮಾಂಟಿಗೂ ಅವನನ್ನು ಇಂಡಿಯದ ಸ್ಟೇಟಸೆಕ್ರಟರಿ ಆಗಿ ನೇಮಿಸಿದನು ಲಾರ್ಡ ಮಾಂಟಿಗೂ ಭಾರತೀಯರ ಸಮಸ್ಯೆಗಳ ಬಗ್ಗೆತುಂಬಾ ಸಹಾನುಬೂತಿ ವ್ಯಕ್ತ ಪಡಿಸಿದನಲ್ಲದೆ, 1917 ಆಗಸ್ಟ್ ನಲ್ಲಿ ಒಂದು ಹೇಳಿಕೆನೀಡುತ್ತಾ ಆಡಳಿತದ ಎಲ್ಲ ಹಂತಗಳಲ್ಲಿ ಭಾರತೀಯರನ್ನು ಅಧಿಕ ಸಂಖ್ಯೆಯಲ್ಲಿ ಸೇರಿಕೊಳ್ಳುವುದು ಹಾಗೂ ಬ್ರಿಟೀಷ್ ಸಾಮ್ರಜ್ಯದ ಅಂಗವಾಗಿ ಕ್ರಮೇಣ ಸ್ವಯಂ ಆಡಳಿತ ಸಂಸ್ಥೆಗಳನ್ನು ಅಭಿವೃದ್ಧಿಗೊಳಿಸುವ ಮೂಲಕ ಭಾರತದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸುವುದು ಬ್ರಿಟಿಷ್ ಸರ್ಕಾರದ ನೀತಿಯಾಗಿದೆ ಎಂದು ತಿಳಿಸಿದನು. ಈ ನಿಟ್ಟಿನಲ್ಲಿ ಅದಸ್ಟು ಬೇಗ ಕ್ರಮಗಳನ್ನು ತೆಗೆದು ಕೊಳ್ಳಲಾಗುವುದೆಂದೂ ಸಹ ತಿಳಿಸಿದೆ ಈ ಹಿನ್ನೆಲೆಯಲ್ಲಿ 1919 ರಲ್ಲಿ ಮಾಂಟಿಗೂ-ಚೆಲ್ಮ್ಸಫರ್ಡ ಸುಧಾರಣೆಗಳು, ಭಾರತದಲ್ಲಿ ಸ್ವಯಮ್ ಆಡಳಿತ, ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವ ದಿಸೆಯಲ್ಲಿ ಒಂದು ಗಮನಾರ್ಹ ಬೆಳವಣಿಗೆ ಆಗಿದ್ದರೂ, ಭಾರತೀಯರು ಇದರಿಂದ ತೃಪ್ತರಾಗಲಿಲ್ಲ. ಇದು ಕಾಂಗ್ರೆಸ್ಸಿನ ವಲಯಗಳಲ್ಲಿ ಒಡಕಿಗೆ ಕಾರಣವಾಯಿತು. ಕಾಂಗ್ರೆಸ್‌ಒಂದು ವಿಶೇಷ ಅಧಿವೇಶನ ನಡೆಸಿ, ಮಾಂಟಿಗೂ - ಚೆಲ್ಮಸ್‌ಫರ್ಡ ಸುಧಾರಣೆಗಳನ್ನು ಕೂಲಂಕುಶವಾಗಿ ಚರ್ಚಿಸಿ, ಅವುಗಳು ಅತ್ಯೃಪ್ತಿಕರವೂ,ಅತ್ಯಲ್ಪವೂ ಮತ್ತು ತುಂಬಾ ನಿರಾಶೇದಾಯಕವೂ ಆಗಿವೆಎಂಬ ಅಭಿಪ್ರಾಯಕ್ಕೆ ಬಂದಿತ್ತು. ಬ್ರಿಟೀಷರ ವಿರುದ್ಧ ಭಾರತೀಯರ ಆಕ್ರೋಶ ಮತ್ತೆ ಬುಗಿಲೆದ್ದಿತು. ಅದೇ ಸಮಯದಲ್ಲಿ ಬ್ರಿಟಿಷ್ ಸರ್ಕಾರ ಹೊರಡಿಸಿದ 1919ರ ಕುಪ್ರಸಿದ್ದ ಕ್‌ಲತ್ ಕಾನೂನುಗಳು ಭಾರತೀಯ ರಾಷ್ಟ್ರೀಯ ಚಳವಳಿಯನ್ನು ಮತ್ತಷ್ಟು ಬಲಯುತಗೊಳಿಸಿತು. ದಕ್ಷಣ ಆಫ್ರಿಕಾದಿಂದ ಆಗತಾನೆ ಭಾರತಕ್ಕೆಬಂದಿದ್ದ ಗಾಂಧೀಜಿಯವರು ಭಾರತೀಯ ರಾಜಕೀಯ ರಂಗವನ್ನು ಪ್ರವೇಶಿಸಲು ಈ ಕೆಟ್ಟ ಕಾನೂನುಗಳು ಕಾರಣವಾದವು.

**ರಾಷ್ಟ್ರೀಯ ಚಳವಳಿಯ ಮೂರನೇ ಹಂತ:**

**ಗಾಂಧೀಯುಗ:**

1920 ರಿಂದ 1947 ರ ವರೆಗಿನ ಕಾಲವನ್ನು ಗಾಂಧೀಯುಗವೆಂದು ಸಾಮಾನ್ಯವಾಗಿ ಕರೆಯಲಾಗಿದೆ. ಈ ಅವಧಿಯಲ್ಲಿ ಗಾಂಧೀಜಿಯವರು ರಾಷ್ಟ್ರೀಯ ಚಳವಳಿಯ ಮುಂಚೂಣೆಯಲ್ಲಿದ್ದು ಭಾರತೀಯರ



ಮೇಲೆ ಅಗಾಧವಾದ ಮತ್ತು ಅಚ್ಚಳಿಯದ ಪ್ರಭಾವ ಬಾರಿ ರಾಷ್ಟ್ರದ ಜನತೆಯಲ್ಲಿಹೊಸ ಉತ್ಸಹ ಚೈತನ್ಯಗಲನ್ನು ಮೂಡಿಸಿದರು, ರಾಷ್ಟ್ರಯ ಚಳವಳಿಗೆ ಗಾಂಧೀಜಿ ಒಂದು ಹೊಸ ತಿರುವು ಸ್ವರೂಪ ನೀಡಿದರಲ್ಲದೆ, ಪ್ರಪಂಚದಲ್ಲಿ ಮತ್ತೆ ಯಾವ ರಾಷ್ಟ್ರವೂ ಅನುಸರಿಸದ ಅಹಿಂಸೆ ಸತ್ಯಾಗ್ರಹ ಮಾರ್ಗಗಳಿಂದ ರಾಷ್ಟ್ರೀಯ ಚಳವಳಿಯನ್ನು ಅಂತ್ರಂತ ಯಶಸ್ವಿ ಚಳವಳಿಯನ್ನಾಗಿ ಮಾರ್ಪಡಿಸಿದರು ರಾಷ್ಟ್ರೀಯ ಚಳವಳಿಯ ಹಿರಿದಿನ ನಾಯಕರು ಇಲ್ಲವಾದಾಗ, ಗಾಂಧೀಜಿಯವರು ರಾಷ್ಟ್ರೀಯ ಚಳವಳಿಯ ನಾಯಕತ್ವ ವಹಿಸಿಕೊಂಡು ಭಾರತೀಯರಿಗೆ ಸ್ಪೂರ್ತಿಯ ಸಂಕೇತ ವಾಗಿದ್ದರು.ಸರ್ ಫಿರೂಜ್ ಷಾ ಮೆಹ್ತ ಗೊಪಾಲಕೃಷ್ಣ ಗೋಖಲೆಯವರು 1915 ರಲ್ಲಿ ಕಾಲನಾದರು 1920 ರಲ್ಲಿ ಭಾಲಗಂಗಾಧರತಿಲಕರು ಮರಣ ಹೊಂದಿದರು ಇದರಿಂದಾಗಿ ಸಮರ್ಥ ನಾಯಕರಿಲ್ಲದೆ ಕಾಂಗ್ರೆಸ್ ಅತ್ಯಂತ ಸಂಧಿಗ್ದ ಪರಿಸ್ಥಿತಿಯಲ್ಲಿತ್ತು ಭಾರತದ ರಾಜಕೀಯ ಕ್ಷೇತ್ರದಲ್ಲಿ ಒಂದು ರೀತಿಯರಾಜಕೀಯ ಶೂನ್ಯತೆ ಉಂಟಾಯಿತು ಅಂತಹ ಪರಿಸ್ಥಿತಿಯಲ್ಲಿ ಗಾಂಧೀಜೀಯವರು ಭಾರತೀಯ ರಾಜಕೀಯ ರಂಗ ಪ್ರವೇಶಿಸಿ ಭಾರತದ ಸ್ವಾತಂತ್ರ್ಯ ಹೊರಾಟಕ್ಕೆಅಸಮಾನ್ಯ ಮತ್ತುಪರಿಣಾಮಕಾರಿ ನಾಯಕತ್ವ ಒದಗಿಸಿದರು.

**ಅಹಿಂಸಾತ್ಮಕ- ಅಸಹಕಾರಿ ಚಳವಳಿ:**

ಗಾಂಧೀಜಿಯವರು ತಮ್ಮ ಅಸಮಾನ್ಯ ವ್ಯಕ್ತಿತ್ವ, ನಿಸ್ಪೃಹತೆ, ನಿರ್ಭೀತಿ, ದೀನದಲಿತರ ಬಗ್ಗೆ ಅವರಿಗಿದ್ದ ಕಾಳಜಿ. ರಾಷ್ಟ್ರದ ಸ್ವಾತಂತ್ರ್ಯ ಮತ್ತು ಹಿತದಲ್ಲಿ ಅವರಿಗಿದ್ದ ಆಸಕ್ತಿ ಇವಲ್ಲವೂ ಗಾಂಧೀಜಿಯವರನ್ನು ಒಬ್ಬ ಅಸಾಧಾರಣ, ಅದ್ವಿತೀಯ ನಾಯಕನನಾನ್ನಾಗಿ ಮಾಡಿದವು. ಅವರ ನಾಯಕತ್ವದಲ್ಲಿ ಕಾಂಗ್ರೆಸ್ 1920 ರಲ್ಲಿ ಅಸಹಕಾರ ಚಳವಳಿ ಆರಂಭಿಸಿ, ಭಾರತದ ರಾಷ್ಟ್ರೀಯ ಚಳವಳಿಯ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಕ್ರಾಂತಿ ಕಾರಕ ಮಾರ್ಗಹಿಡಿಯಿತೆಂದು ಹೇಳಬಹುದು. ಅಹಿಂಸಾತ್ಮಕ ಅಸಹಕಾರ ಚಳವಳಿಗೆ ಅನೇಕ ಘಟನೆಗಳು ಸೂಕ್ತ ವಾತಾವರಣ ನಿರ್ಮಿಸಿದವು.

1919ರ ಮಾರ್ಚಿತಿಂಗಳಲ್ಲಿ ಜಾರಿಗೆ ಬಂದ ಕರಾಳ ಕೌಲತ್ ಕಾನೂನುಗಳು ಗಾಂಧೀಜೀಯವರ ಅಹಿಂಸಾತ್ಮಕ ಅಸಹಕಾರ ಚಳವಳಿಗೆ ಪ್ರಮುಖ ಕಾರಣವಾಗಿತ್ತು. ಭಾರತದಲ್ಲಿ ನಡೆಯುತ್ತಿದ್ದ ಕ್ರಾಂತಿಕಾರಕ ಚಳವಳಿಯ ಬಗ್ಗೆ ವಿಚಾರಣೆ ನಡೆಸಲು ಬ್ರಿಟಿಷ್ ನ್ಯಾಯಾದೀಶ ಕೌಲತ್‌ನ ಅಧ್ಯಕ್ಷತೆಯಲ್ಲಿ 1917 ರಲ್ಲಿ ಒಂದು ಸಮಿತಿ ರಚಿಸಲಾಯಿತು. ಈ ಕ್‌ಲತ್ ಸಮಿತಿಯು 1918 ರಲ್ಲಿ ಸರ್ಕಾರಕ್ಕೆ ತನ್ನ ವರದಿ ಸಲ್ಲಿಸಿತು. ಈ ವರದಿಯು ಕೌಲತ್ ಮಸೂದೆ ಅಥವಾ ಕಾನೂನುಗಳೆಂಬ ಹೆಸರಿನಿಂದ 1919ರ ಮಾರ್ಚಿಯಲ್ಲಿ ಜಾರಿಗೆ ಬಂದವು. ಯುದ್ಧಕಾಲದಲ್ಲಿ ಸರ್ಕಾರದ ಅಸಮಾನ್ಯ ಧಮನಕಾರಿ ಅಧಿಕಾರವನ್ನು ಮತ್ತೆ ಮುಂದುವರೆಸಲು ಈ ರೌಲತ್ ಕಾನೂನುಗಳು ಶಿಫಾರಸು ಮಾಡಿದವು. ಯಾವುದೇ ವಾರಂಟಿಲ್ಲದೆ ಶಂಕಿತ ಅಪರಾಧಿಗಳ ಸ್ಥಳವನ್ನು ಶೋಧಿಸಿ ಅಪರಾಧಿಗಳನ್ನು ಬಂಧಿಸುವುದು, ಶಂಕಿತ ಅಪರಾದಿಗಳನ್ನು ವಿಚಾರಣೆ ನಡೆಸದೆಯೇ ಅನಿರ್ದಿಷ್ಟಕಾಲದವರೆಗೆ ಬಂಧನದಲ್ಲಿಡುವ ಅಧಿಕಾರವನ್ನು ಸರ್ಕಾರಕ್ಕೆ ನೀಡಲಾಯುತು, ಈ ಕರಾಳ ರೌಲತ್ ಮಸೂದೆ ಕಾನೂನುಗಳನ್ನು ಭಾರತೀಯರು ಉಗ್ರವಾಗಿ



ಖಂಡಿಸಿದರು. ಶ್ರೀನಿವಾಸ ಶಾಸ್ತ್ರಿ, ಜಿನ್ನ, ಬ್ಯಾನರ್ಜಿ ಸರ್‌ತೇಜ್ ಬಹದ್ದೂರ್ ಸಪ್ರು ಮುಂತಾದ ನಾಯಕರು ಒಕ್ಕೂರಲಿನಿಂದ ರೌಲತ್ ಕಾನೂನುಗಳನ್ನು ಖಂಡಿಸಿ, ಅವುಗಳನ್ನು ಹಿಂತೆಗೆದುಕೊಳ್ಳಬೇಕೆಂದು ಸರ್ಕಾರವನ್ನು ಆಗ್ರಹಪಡಿಸಿದರು. ಆ ವೇಳೆಗಾಗಲೇ ಕಾಂಗ್ರೆಸ್ಸಿನ ಹಾಗೂ ಇಡೀ ರಾಷ್ಟ್ರದ ನಿರ್ವಿವಾದ ನಾಯಕರಾಗಿದ್ದ ಗಾಂಧೀಜಿಯವರು ಭಾರತೀಯರು ತಮ್ಮ ರಾಷ್ಟ್ರದ ಪ್ರಭುಗಳಾಗುವವರೆಗೂ, ಅವರು ಸ್ವತಂತ್ರರಾಗಿ ಮತ್ತು ಗೌರವದಿಂದ ಬಾಳುವುದು ಸಾಧ್ಯವಿಲ್ಲವೆಂಬುದನ್ನು ಮನಗಂಡರು, ದಕ್ಷಿಣ ಆಫ್ರಿಕಾದಲ್ಲಿ ಗಾಂಧೀಜಿಯವರು ನಡೆಸಿದ್ದ ವಿಶಿಷ್ಟ ರೀತಿಯ ಸತ್ಯಾಗ್ರಹ ಹೋರಾಟ, ಭಾರತದಲ್ಲಿಯೂ ಬ್ರಿಟೀಷರ ಅನ್ಯಾಯ ದೌರ್ಜನ್ಯ ಮತ್ತು ಕೆಟ್ಟ ಆಳ್ವಿಕೆಯ ವಿರುದ್ಧ ಅತ್ಯಂತ ಪರಿಣಾಮ ಕಾರಿ ಅಸ್ತ್ರವಾಗಬಹುದೆಂದು ಅವರು ಅರಿತರು. ಗಾಂಧೀಜಿಯವರು ವೈಸ್ ರಾಯ್ ಚೆಲ್ಮ್ಸ್ ಫರ್ಡ್ ಅವರಿಗೆ ಪತ್ರ ಬರೆದು ಭಾರತೀಯರ ಆತ್ಮ ಗೌರವಕ್ಕೆ ಧಕ್ಕೆ ಉಂಟುಮಾಡುವಂತಹ ರೌಲತ್ ಕಾನೂನುಗಳನ್ನು ಹಿಂತೆಗೆದುಕೊಳ್ಳಬೇಕೆಂದು ಆಗ್ರಹಿಸಿದರು. ಆದರೆ ಬ್ರಿಟಿಷ್ ಪ್ರಭುತ್ವ ಇದಾವುದನ್ನು ಗಮನಕ್ಕೆ ತೆಗೆದು ಕೊಳ್ಳದೆ ತನ್ನ ದಮನಕಾರಿ ಮತ್ತು ಮೊಂಡುತನದ ನೀತಿಗೆ ಬದ್ಧವಾಗಿತ್ತು.

**ಜಲಿಯನ್ ವಾಲಾಬಾಗ್ ಘಟನೆ:** ಇಡೀ ಭಾರತ ಒಂದಾಗಿ ಗಾಂಧೀಜಿಯವರ ಅಹಿಂಸಾತ್ಮಕ ಅಸಹಕಾರ ಚಳವಳಿಗೆ ತನ್ನ ಸಂಪೂರ್ಣ ಬೆಂಬಲ ನಿಡಿತು. ಭಾರತದ ಅನೇಕ ಕಡೆ ಶಾಂತರೀತಿಯಲ್ಲಿ ಹರತಾಳಗಳು ಉಪವಾಸ ಪ್ರಾರ್ಥನೆ ಮತ್ತು ಬೃಹತ್ ಸಭೆಗಳು ನಡೆದವು ಸಹಸ್ರಾರು ಜನರು ಈ ಕಾರ್ಯಕ್ರಮಗಳಲ್ಲಿ ಅತಿ ಉತ್ಸಾಹದಿಂದ ಭಾಗವಹಿಸಿದರು. ಕೆಲವು ಸಣ್ಣ ಪುಟ್ಟ ಹಿಂಸಾತ್ಮಕ ಘಟನೆಗಳನ್ನು ಬಿಟ್ಟರೆ ಹರತಾಳ ಶಾಂತಯುತವಾಗಿದ್ದು ಸಂಪೂರ್ಣವಾಗಿ ಫಲಪ್ರದವಾಯಿತೆಂದು ಹೇಳಬಹುದು. ಅದಾಗ್ಯೂ ಚಳವಳಿಗಾರರ ವಿರುದ್ಧ ಅಮಾನುಷ ರೀತಿಯಲ್ಲಿ ನಡೆದುಕೊಂಡಿತು,ಬ್ರಿಟಿಷ್ ಪ್ರಭುತ್ವ.

ಬ್ರಿಟಿಷ್ ಸರ್ಕಾರದ ನೀಚ ಹಾಗೂ ರಾಷಸೀಕೃತ್ಯಗಳು ಪಂಜಾಬಿನ ಅಮೃತಸರದಲ್ಲಿ ಹೆಚ್ಚು ಪ್ರಕಟಗೊಂಡವು ಪಂಜಾಬಿನ ಇಬ್ಬರು ಪ್ರಮುಖ ಕಾಂಗ್ರೆಸ್ ನಾಯಕರಾಗಿದ್ದ ಡಾ॥ ಸತ್ಯಪಾಲ್ ಮತ್ತು ಡಾ॥ ಕಿಚಲ್ಯು ಅವರನ್ನು 1919 ರ ಎಪ್ರಿಲ್ 10 ರಂದು ದಸ್ತಗಿರಿ ಮಾಡಿ, ಶಾಂತ ರೀತಿಯಲ್ಲಿ ಹರತಾಳ ನಡೆಸುತ್ತಿದ್ದ ಜನರನ್ನು ಸರ್ಕಾರ ಕೆರಳಿಸಿತು. ಚಳವಳಿಗಾರರು ರೊಚ್ಚಿಗೆದ್ದು ಐವರು ಯುರೋಪಿಯನ್ನರನ್ನು ಕೊಲೆಮಾಡಿ ಸಾರ್ವಜನಿಕ ಕಟ್ಟಡಗಳಿಗೆ ಬೆಂಕಿ ಇಟ್ಟರು. ಪರಿಸ್ಥಿತಿ ಉಲ್ಬಣವಾದ್ದರಿಂದ ಜನರಲ್ ರೆಜಿನಾಲ್ಡಿಡಯರ್ ಅವನನ್ನು ಪರಿಸ್ಥಿತಿ ಸುಧಾರಿಸುವಂತೆ ಮಾಡಲು ಅಮೃತಸರಕ್ಕೆ ಕಳುಹಿಸಲಾಯಿತು. ಪಂಜಾಬಿನ ಲೆಫ್ಟಿನೆಂಟ್ ಗೌರ್‍ನರ್ ಸರ್ ಮೈಕೇಲ್ ಓಡಯರ್ ಮತ್ತು ಜನರಲ್ ರೆಜನಾಲ್ಡಡಯರ್ ಇಬ್ಬರು ಕಟ್ಟಾ ಸಾಮ್ರಾಜ್ಯವಾದಿಗಳಾಗಿದ್ದು, ಜನರನ್ನು ಅಮಾನುಷ ರೀತಿಯಲ್ಲಿ ಸದೆ ಬಡಿದರೆ, ಭಾರತೀಯರು ಸ್ವಾತಂತ್ರ ಚಳವಳಿಯನ್ನು ಕೈಬಿಡುವರೆಂದು ಭಾವಿಸಿದರು. ನಗರದಲ್ಲಿ ಯಾವುದೇ ರಾಜಕೀಯ ಸಭೆಗಳು ಮೆರವಣಿಗೆಗಳನ್ನು ನಡೆಸಬಾರದೆಂದು ರೆಜಿನಾಲ್ಡಡಯರ್ ಆದೇಶ ಹೊರಡಿಸಿದ. ಆದರೆ ಅಮೃತಸರದ ಕಾಂಗ್ರೆಸ್ ನಾಯಕರು, ಸರ್ಕಾರದ ದಮನಕಾರಿ ನೀತಿ ಕಾರ್ಯಕ್ರಮಗಳನ್ನು ವಿರೋಧಿಸಲು 1919 ರ ಎಪ್ರಿಲ್ 13 ರಂದು ಒಂದು ಸಾರ್ವಜನಿಕ ಬೃಹತ್



ಸಭೆಯೊಂದನ್ನು ಜಲಿಯನ್ ವಾಲಾ ಬಾಗ್‌ನಲ್ಲಿ ಏರ್ಪಡಿಸಿದರು ಈ ಬೃಹತ್ ಸಭೆಯಲ್ಲಿ ಸುಮಾರು 20,000 ಜನರು, ಗಂಡಸರು, ಹೆಂಗಸರು ಮಕ್ಕಳು ಸೇರಿದ್ದರು, ತನ್ನ ಆಜ್ಞೆಯನ್ನು ಉಲ್ಲಂಘಿಸಿ ಸಭೆ ನಡೆಸಿದವರನ್ನು ಕ್ರೂರ ರೀತಿಯಲ್ಲಿ ಶಿಕ್ಷಿಸಲು, ಅವರಿಗೆ ತಕ್ಕ ಪಾಠಕಲಿಸಲು ಜನರಲ್ ಡಯರ್ ತನ್ನ ಸೈನಿಕರೊಡನೆ ಸಭೆ ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿ ಸಭೆಯನ್ನು ಚದುರಿಸಲು, ಗುಂಡಿನ ಮಳೆಗರೆಯಲು ಆಜ್ಞಾಪಿಸಿದ. ಮದ್ದು ಗುಂಡುಗಳು ಮುಗಿಯುವವರೆಗೂ ಅಮಾಯಕ ಜನರ ಮೇಲೆ ಹತ್ಯಾಕಾಂಡ ನಡೆಸಲಾಯಿತು. ಸುಮಾರು ಒಂದು ಗಂಟೆಯ ಒಳಗೆ 375ಕ್ಕೆ ಹೆಚ್ಚು ಜನರು ಅಮಾನುಷ್ಯ ರೀತಿಯಲ್ಲಿ ಕೊಲೆಗೀಡಾದರು ಮತ್ತು ಸುಮಾರು 1500 ಜನರು ತೀವ್ರವಾಗಿ ಗಾಯಗೊಂಡರು. ಒಂದು ರೀತಿಯ ಭಯಾನಕ ಪರಿಸ್ಥಿತಿ ಉಂಟಾಗಿ ಜನರಲ್ಲಿ ಭಯ ಭೀತಿ ಆಶ್ಚರ್ಯಗಳು ಉಂಟಾದವು. ಜಲಿಯನ್ ವಾಲಾಬಾಗಿನ ಅನಾಗರೀಕ ಹತ್ಯಾಕಾಂಡ ಮತ್ತು ಪಂಜಾಬ್ ಆಡಳಿತಾಧಿಕಾರಿಗಳ ಕ್ರೂರ ಕ್ರಮಗಳು ಜನರಲ್ಲಿ, ಸ್ವಾತಂತ್ರಗಳಿಸಲು, ಮತ್ತಷ್ಟು ಸಂಘಟಿತ ಹೋರಾಟ ನಡೆಸಬೇಕೆಂಬ ಭಾವನೆ ಬೆಳೆಸಿತು. ಅದೇ ರೀತಿ ಬ್ರಿಟೀಷ್‌ರ ಬಗ್ಗೆ ಅತೀವ ಜಗುಪ್ಸೆ, ದ್ವೇಷಕ್ಕೂ ಜಲಿಯನ್ ವಾಲಾಬಾಗ್ ಪ್ರಕರಣ ಕಾರಣವಾಯಿತು. ಗಾಂಧೀಜಿಯವರು ಈ ಘಟನೆಯಿಂದ ತುಂಬಾ ನೊಂದು ಭಾರತೀಯರಿಗೆ ಸ್ವಾತಂತ್ರ್ಯ ಮತ್ತು ಸ್ವಯಮಾಡಳಿತ ದೊರಕುವಂತೆ ಮಾಡಲು ತಮ್ಮ ಹೋರಾಟವನ್ನು ಮತ್ತಷ್ಟು ಬಿರುಸಾಗಿ ನಡೆಸಬೇಕೆಂಬ ನಿರ್ಧಾರಕ್ಕೆ ಬಂದರು.


ಡಾ.ಕಿಚಲ್ಯು


ಸತ್ಯಪಾಲ್

**ಖಿಲಾಫತ್ ಚಳವಳಿ:**

ಗಾಂಧೀಜಿಯವರ ಅಹಿಂಸಾತ್ಮಕ ಅಸಹಕಾರ ಚಳವಳಿಗೆ ಪೂರಕವಾಗಿದ್ದ ಮತ್ತೊಂದು ಪ್ರಮುಖ ಬೆಳವಣಿಗೆಯೆಂದರೆ ಭಾರತದಲ್ಲಿ ಪ್ರಾರಂಭವಾದ ಖಿಲಾಫತ್ ಚಳವಳಿ, ಜಲಿಯನ್ ವಾಲಾಬಾಗ್ ದುರಂತದಿಂದ ಇಡೀ ಭಾರತ ಕ್ರುದ್ಧವಾಗಿದ್ದ ಸಮಯದಲ್ಲಿಯೇ ಭಾರತೀಯ ಮುಸ್ಲಿಮರು, ತುರ್ಕಿಯ ಸುಲ್ತಾನನ ಬಗ್ಗೆ ಬ್ರಿಟೀಷರು ಅನುಸರಿಸಿದ ನೀತಿಯಿಂದ ತುಂಬಾ ಅಸಮಾಧಾನದಿಂದ ಕುದಿಯುತ್ತಿದ್ದರು. ಪ್ರಪಂಚದ ಮೊದಲನೇ ಮಹಾಯುದ್ಧದಲ್ಲಿ ಮಿತ್ರ ರಾಷ್ಟ್ರಗಳು ತುರ್ಕಿಯನ್ನು ಸೋಲಿಸಿ ತುರ್ಕಿಯ ಸಾಮ್ರಾಜ್ಯವನ್ನು



ಛಿದ್ರಗೊಳಿಸಿ, ತುರ್ಕಿ ಸುಲ್ತಾನನ ಮತೀಯ ಸ್ಥಾನಮಾನಗಳು ಅಧಿಕಾರಗಳನ್ನು ನಾಶಗೊಳಿಸಿದರು. ಇದರಿಂದ ಪ್ರಪಂಚದಾದ್ಯಂತ ಮುಸ್ಲಿಮರು, ಮಿತ್ರರಾಷ್ಟ್ರಗಳು ತಮ್ಮ ಸುಲ್ತಾನ ಮತ್ತು ಧರ್ಮಕ್ಕೆ ಅವಹೇಳನ ಮಾಡಿದರೆಂದು ತಮ್ಮ ಆಕ್ರೋಶ ವ್ಯಕ್ತಪಡಿಸಿದರು. ಭಾರತೀಯ ಮುಸ್ಲಿಮರು ಆಲಿ ಸೋದರರ ನಾಯಕತ್ವದಲ್ಲಿ ಬ್ರಿಟೀಷರ್ನ ವಿರುದ್ಧ ರಾಷ್ಟ್ರಾದ್ಯಂತ ಪ್ರತಿಭಟನೆ, ಪ್ರದರ್ಶನ ನಡೆಸಲು ಸಿದ್ಧತೆ ನಡೆಸಿದರು. ಅವರು ಗಾಂಧೀಜಿಯವರ ಸಹಕಾರವನ್ನು ಕೋರಿದಾಗ, ಭಾರತದಲ್ಲಿ ಹಿಂದೂ-ಮುಸ್ಲಿಮ್ ಐಕ್ಯತೆಗಾಗಿ ಶ್ರಮಿಸುತ್ತಿದ್ದ ಗಾಂಧೀಜಿಯವರು ಕೂಡಲೇ ತಮ್ಮ ಬೆಂಬಲ, ಸಹಕಾರ ನೀಡಲು ಮುಂದೆ ಬಂದರು. ಗಾಧೀಜಿಯವರ ಅಧ್ಯಕ್ಷತೆಯಲ್ಲಿ 1919 ರ ನವೆಂಬರ್ 14 ರಂದು ದೆಹಲಿಯಲ್ಲಿ ಅಖಿಲ ಭಾರತೀಯ ಖಿಲಾಫತ್ ಸಮ್ಮೇಳನವೊಂದು ನಡೆಯಿತು. ಈ ಸಮ್ಮೇಳನದಲ್ಲಿ ಬ್ರಿಟೀಷರ ನೀತಿ ಕಾರ್ಯಕ್ರಮಗಳನ್ನು ಖಂಡಿಸಲಾಯಿತು. ಮುಸ್ಲಿಮರ ಸಮಸ್ಯೆಗಳಿಗೆ ಪರಿಹಾರ ಹುಡುಕಲು ಒಂದು ಅಖಿಲ ಭಾರತ ಖಿಲಾಫತ್ ಸಮಿತಿ ರಚಿಸಲಾಯಿತು ಚಳವಳಿಗೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ವಿವರಿಸಿದರಲ್ಲದೆ, ಹಿಂದೂ ಮುಸ್ಲಿಮ್ ಐಕಮತ್ಯದ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದರು. ಖಿಲಾಫತ್ ಸಮಸ್ಯೆಯನ್ನು ಮುಸ್ಲಿಮರಿಗೆ ತೃಪ್ತಿಯಾಗುವಂತೆ ಪರಿಹರಿಸಬೇಕೆಂದು ಬ್ರಿಟಿಷ್ ಆಳರಸರನ್ನು ಆಗ್ರಹಪಡಿಸಿದರು. ಮುಸ್ಲಿಮರ ಸಮಸ್ಯೆಯನ್ನು ಬಗೆಹರಿಸಲು ನಿರಾಕರಿಸಿದರೆ, ಭಾರತೀಯರು ಸರ್ಕಾರದ ವಿರುದ್ಧ ಅಸಹಕಾರ ಚಳವಳಿ ಹೂಡುವರೆಂದು ಘೋಷಿಸಿದರು.

ಹಿಂದೂ ಹಾಗೂ ಮುಸ್ಲಿಮ್ ನಾಯಕರು 1920 ರ ಜನವರಿಯಲ್ಲಿ ಬ್ರಿಟಿಷ್ ವೈಸ್ರಾಯ್ ಹಾಗೂ ಪ್ರಧಾನ ಮಂತ್ರಿ ಲಾಯ್ಡ್‌ಜಾರ್ಜ್ ಅವರನ್ನು ಬೇಟಿ ಮಾಡಿ ಖಿಲಾಪತ್ ಸಮಸ್ಯೆಯನ್ನು ಬಗೆಹರಿಸಬೇಕೆಂದು ಮನವಿ ಸಲ್ಲಿಸಿದರು. ಆದರೆ ಅವರ ಮನವಿಗಳಿಗೆ ಬ್ರಿಟೀಷರು ಪ್ರತಿಕೂಲ ಧೋರಣೆ ತಾಳಿದ್ದರಿಂದ ಭಾರತೀಯರು ನಿರಾಶೆಯಿಂದ ಸಾರ್ವತ್ರಿಕ ಉಪವಾಸ, ಹರತಾಳ ಪ್ರಾರ್ಥನೆಗಳ ಮೂಲಕ ತಮ್ಮ ಪ್ರತಿಭಟನೆ ವ್ಯಕ್ತಪಡಿಸಿದರು. ಬ್ರಿಟೀಷರು ಭಾರತದ ಸ್ವಾತಂತ್ರ ಚಳವಳಿಯನ್ನು ನಿರ್ದಯವಾಗಿ ದಮನ ಗೊಳಿಸುವ ಪ್ರಯತ್ನ ಮಾಡಿದ್ದು, ಕರಾಳ ರೌಲತ್ ಕಾನೂನುಗಳು, ಜಲಿಯನ್ ವಾಲಾಭಾಗ್ ದುರಂತ, ಖಿಲಾಫತ್ ಚಳವಳಿ ಮುಂತಾದ ಬೆಳವಣಿಗೆಗಳು ರಾಷ್ಟ್ರದಲ್ಲಿ ಪ್ರಕ್ಷುಬ್ಧ ರಾಜಕೀಯ ವಾತಾವರಣಕ್ಕೆ ಅವಕಾಶ ಮಾಡಿಕೊಟ್ಟವು. ಈ ಘಟನೆಗಳೆಲ್ಲವೂ, ಮಹಾತ್ಮ ಗಾಂಧೀಜಿಯವರು ಬ್ರಿಟೀಷರ ವಿರುದ್ದ ನೇರ ಹೋರಾಟಕ್ಕೆ ದೃಢ ನಿರ್ಧಾರ ತೆಗೆದು ಕೊಳ್ಳುವಂತೆ ಮಾಡಿದವು. ರಾಷ್ಟ್ರದ ಸ್ವಾತಂತ್ರ್ಯ ಗಳಿಸಲು ಸಹಕಾರಿಯಾಗುವಂತಹ ಎಲ್ಲ ಶಕ್ತಿಯುತ ಸೆಳೆತಗಳನ್ನು ಸಂಘಟಿಸಿ ರಾಷ್ಟ್ರವ್ಯಾಪಿಯಾದ ಅಹಿಂಸಾತ್ಮಕ ಅಸಹಕಾರ ಜನಾಂದೋಳನ ನಡೆಸುವುದು ಗಾಂಧೀಜಿಯವರ ಗುರಿಯಾಗಿತ್ತು.

ಗಾಂಧೀಜಿಯವರ ಅಹಿಂಸಾತ್ಮಕ ಅಸಹಕಾರ ಚಳವಳಿಯ ಬಗ್ಗೆ ಚರ್ಚಿಸಲು 1920 ಸೆಪ್ಟೆಂಬರ್‌ಲ್ಲಿ ಲಾಲಾ ರಜಪತರಾಯ್ ಅವರ ನೇತೃತ್ವದಲ್ಲಿ ಕಾಂಗ್ರೆಸ್ಸಿನ ವಿಸೇಷ ಅಧಿವೇಶನವೊಂದು ಕಲ್ಕತ್ತದಲ್ಲಿ ಜರುಗಿತು. ಈ ಅಧಿವೇಶನದಲ್ಲಿ ಗಾಂಧೀಜಿಯವರೇ ಅಸಹಕಾರ ಮಸೂದೆಯನ್ನು ಮಂಡಿಸಿದರು .



ನಂತರ 1920 ರ ಡಿಸೆಂಬರ್ ನಲ್ಲಿ ನಾಗಪುರದ ವಾರ್ಷಿಕ ಅಧಿವೇಶನದಲ್ಲಿ ಅಸಹಕಾರ ಚಳವಳಿಯ ಕಾರ್ಯಕ್ರಮವನ್ನು ವಿಶೇಷ ಬಹುಮತದಿಂದ ಅನುಮೋದಿಸಲಾಯಿತು. 1920ರ ಮಾರ್ಚಿಯಲ್ಲಿ ಅಸಹಕಾರ ಚಳವಳಿಯ ಕಾರ್ಯಕ್ರಮಕ್ಕೆ ಸಂಬಂಧಿಸಿದ ಪ್ರಕಟಣೆಯೊಂದನ್ನು ಗಾಂಧೀಜಿಯವರು ಪ್ರಕಟಿಸಿದರು. ಇದರ ಪ್ರಮುಖ ಅಂಶಗಳೆಂದಲೆ, (1) ವಿದೇಶಿವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶೀ ವಸ್ತುಗಳನ್ನು ಬಳಸುವುದು (2) ಸರ್ಕಾರಿ ಹುದ್ದೆಗಳು, ನ್ಯಾಯಾಲಯಗಳು ಶಾಲಾ ಕಾಲೇಜುಗಳನ್ನು ಬಹಿಷರಿಸುವುದು (3) ಸರ್ಕಾರ ನೀಡಿದ್ದ ಗೌರವಾನ್ವಿತ ಹುದ್ದೆಗಳು, ಬಿರುದುಗಳನ್ನು ತ್ಯಜಿಸುವುದು (4) ಸ್ಥಳೀಯ ಸಂಸ್ಥೆಗಳು ಪ್ರಾಂತೀಯ ಶಾಸನ ಸಭೆಗಳನ್ನು ಮತ್ತು ಮಾಂಟಫರ್ಡ್ ಸುಧಾರಣೆಗಳನ್ನು ಬಹಿಷ್ಕರಿಸುವುದು (5) ಸರ್ಕಾರಕ್ಕೆ ತೆರಿಗೆ ಸಲ್ಲಿಸದಿರುವುರು (6) ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದು (7) ತಮ್ಮದೇ ಆದ ಪಂಚಾಯಿತಿ ನ್ಯಾಯಾಲಯಗಳನ್ನು ಸ್ಥಾಪಿಸುವುದು(8) ಮತೀಯ ಸೌಹಾರ್ದ ಸಾಧಿಸುವುದು ಮತ್ತು ಅಸ್ಪಶ್ಯತೆಯನ್ನು ತೊಡೆದುಹಾಕುವುದು, ಮುಂತಾದವುಗಳು.

ಅಹಿಂಸಾತ್ಮಕ ಅಸಹಕಾರ ಚಳವಳಿಗೆ ರಾಷ್ಟ್ರಾದ್ಯಂತ ಅಭೂತಪೂರ್ವ ಸ್ವಾಗತ ಬೆಂಬಲ ದೊರಕಿತು. ಅಸಹಕಾರ ಚಳವಳಿಯ ಪ್ರಾಮುಖ್ಯತೆ ಸಂದೇಶಗಳನ್ನು ಜನರಿಗೆ ನೇರವಾಗಿ ಮುಟ್ಟಿಸಲು ಗಾಂಧೀಜಿ ಮತ್ತು ಆಲಿ ಸಹೋದರರು ದೇಶದ ಅನೇಕ ಕಡೆ ಸಂಚರಿಸಿ ಜನರಿಗೆ ಸ್ಫೂರ್ತಿ ನೀಡಿದರು. ಎಂತಹ ಸಂದರ್ಭದಲ್ಲಿಯೂ ಸತ್ಯ ಮತ್ತು ಅಹಿಂಸೆಯ ತತ್ವಗಳ ಆಚರಣೆಯನ್ನು ಕೈಬಿಡಬಾರದೆಂದು ಸ್ವಾತಂತ್ರ ಗಳಿಸುವವರೆಗೂ ಹೋರಾಟ ನಿಲ್ಲಬಾರದೆಂದು ಜನರಿಗೆ ಮನಮುಟ್ಟುವಂತೆ ತಮ್ಮ ಭಾಷಣಗಳಲ್ಲಿ ತಿಳಿಸಿದರು ಬ್ರಿಟಿಷ್ ಸರ್ಕಾರ ತಮಗೆ ನೀಡಿದ್ದ ಕೈಸರ್-ಇ-ಹಿಂದ್ ಎಂಬ ಬಿರುದನ್ನು ಗಾಂಧೀಜಿಯವರು ತ್ಯಜಿಸಿದರು. ಗಾಂಧೀಜಿಯವರನ್ನು ಅನುಸರಿಸಿ ದೇಶದ ಅನೇಕ ಗಣ್ಯವ್ಯಕ್ತಿಗಳು ತಮಗೆ ಸರ್ಕಾರ ನೀಡಿದ್ದ ಗೌರವ ಬಿರುದುಗಳನ್ನು, ಪದವಿಗಳನ್ನು ತ್ಯಜಿಸಿದರು. ಹೆಸರಾಂತ ವಕೀಲರಾಗಿದ್ದ ಮೋತಿಲಾಲ್ ನೆಹರೂ, ರಾಜೇಂದ್ರ ಪ್ರಸಾದ್ ವಲ್ಲಭಭಾಯಿಪಟೇಲ್, ಚಿತ್ತರಂಜನ ದಾಸ್ ಮೌಲಾನ ಅಬುಲ್ ಕಲಾಮ್ ಆಜಾದ್, ಎಂ.ಆರ್. ಜಯಕರ್., ಸಿ ರಾಜಗೊಪಾಲಚಾರಿ, ಟಿ. ಪ್ರಕಾಶಂ, ಆಸಫ್ ಆಲಿ ಮುಂತಾದವರು ಲಾಭದಾಯಕವಾಗಿದ್ದ ವಕೀಲ ವೃತ್ತಿಯನ್ನು ತ್ಯಜಿಸಿದರು. ಇವರೆಲ್ಲರೂ ತುಂಬು ಮನಸ್ಸಿನಿಂದ ಉತ್ಸಾಹದಿಂದ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿದರು. ಸಹಸ್ರಾರು ವಿದ್ಯಾರ್ಥಿಗಳು ಸರ್ಕಾರಿ ಶಾಲಾ ಕಾಲೇಜುಗಳನ್ನು ತೊರೆದು ಹೆಚ್ಚು ಉತ್ಸಾಹದಿಂದ ಚಳುವಳಿಯಲ್ಲಿ ಧುಮುಕಿದರು. ನೂರಾರು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ವಿದೇಶಿ ವಸ್ತುಗಳು, ಉಡುಪುಗಳನ್ನು ಕಲೆಹಾಕಿ ಬಹಿರಂಗವಾಗಿ ಅವುಗಳಿಗೆ ಬೆಂಕಿಹಚ್ಚಲಾಯಿತು.

ಹೀಗೆ ದೇಶದ ನಾನಾ ಭಾಗಗಳಲ್ಲಿ ಅಸಹಕಾರ ಚಳವಳಿ ವ್ಯಾಪಕವಾಗಿ ಹಬ್ಬುತ್ತಿದ್ದ ಸಮಯದಲ್ಲಿ ರಾಜಕುಮಾರ ಪ್ರಿನ್ಸ್ ಆಫ್ ವೇಲ್ಸನು 1921 ನವೆಂಬರ್-ಡಿಸೆಂಬರ್ ತಿಂಗಳುಗಳಲ್ಲಿ ಭಾರತಕ್ಕೆ ಬೇಟಿ ನೀಡಿದನು. ಜನಸಾಮಾನ್ಯರಲ್ಲಿ ರಾಜಗೌರವ ನಿಷ್ಠೆ ಉತ್ತೇಜಿಸಲು ರಾಜಕುಮಾರನ ಭಾರತ ಭೇಟಿಯನ್ನು ಏರ್ಪಡಿಸಲಾಗಿತ್ತು. ರಾಜಕುಮಾರನ ಭಾರತ ಬೇಟಿಯ ವಿರುದ್ಧ ಪ್ರತಿಭಟಿಸಲು ಕಾಂಗ್ರೆಸ್

ನಿರ್ಧರಿಸಿತು. ಅದರಂತೆ 1921 ನವೆಂಬರ್ 12 ರಂದು ರಾಜಕುಮಾರ ಬೊಂಬಾಯಿ ನಗರಕ್ಕೆ ಬಂದಾಗ, ನಗರದಲ್ಲಿ ಸಂಪೂರ್ಣ ಹರತಾಳ ಆಚರಿಸಲಾಯಿತು. ರಾಜಕುಮಾರ ಹೋದಕಡೆಯಲೆಲ್ಲ, ಅವನು ಹರತಾಳ, ಕಪ್ಪುಬಾವುಟ ಪ್ರತಿಭಟನೆಗಳನ್ನು ಎದುರಿಸಬೇಕಾಯಿತು. ರಸ್ತೆಗಳೆಲ್ಲವು ನಿರ್ಜನವಾಗಿದ್ದವು.

ಭಾರತ ಸ್ವಾತಂತ್ರ ಹೋರಾಟದಲ್ಲಿ 1921 ಅತ್ಯಂತ ಮಹತ್ವದ ವರ್ಷ. 1921 ರ ಡಿಸೆಂಬರನಲ್ಲಿ ಅಹಮದ್ ನಗರದಲ್ಲಿ ಸಮಾವೇಶಗೊಂಡ ಕಾಂಗ್ರೆಸ್ಸಿನ ವಾರ್ಷಿಕ ಸಭೆಯಲ್ಲಿ ಇನ್ನೂ ಹೆಚ್ಚಿನ ಉತ್ಸಾಹದಿಂದ ಅಸಹಕಾರ ಚಳವಳಿಯನ್ನು ಮುಂದುವರೆಸಲು ತೀರ್ಮಾನ ತೆಗೆದುಕೊಳ್ಳಲಾಯಿತು ವೈಯಕ್ತಿಕ ಹಾಗೂ ಸಾಮೂಹಿಕ ಸತ್ಯಾಗ್ರಹ ನಡೆಸಲು ತೀರ್ಮಾನಿಸಲಾಯಿತು. ರಾಷ್ಟ್ರೀಯ ಹೋರಾಟದ ಎಲ್ಲ ರೀತಿಯ ಚಳವಳಿಗೂ ಗಾಂಧೀಜಿಯವರನ್ನು ಏಕೈಕ ನಾಯಕರನ್ನಾಗಿ ಒಪ್ಪಿಕೊಳ್ಳಲಾಯಿತು. ಜನರ ಉತ್ಸಾಹ ಆನಂದ ಮೇರೆ ಮೀರಿದ್ದವು. ಎಲ್ಲರೂ ರಾಷ್ಟ್ರವ್ಯಾಪಿ ಜನತಾ ಚಳವಳಿ ನಿರೀಕ್ಷಿಸಿದ್ದರು. ಆದರೆ ಗಾಂಧೀಜಿಯವರು ಸತ್ಯಾಗ್ರಹ ಚಳವಳಿಯನ್ನು ಗುಜರಾತಿನ ಸಣ್ಣ ಜಿಲ್ಲೆ ಬಾರ್ದೋಲಿಗೆ ಮಾತ್ರ ಸೀಮಿತ ಗೊಳಿಸಲು, ಮತ್ತು ಆಂದ್ರಪ್ರದೇಶದ ಗುಂಟೂರಿನಲ್ಲಿ ತೆರಿಗೆ ನಿರಾಕರಣ ಚಳವಳಿ ಪ್ರಾರಂಭಿಸಲು ತಿಳಿಸಿದರು.

**ಚೌರಿ ಚೌರ ಘಟನೆ:**

ಗಾಂಧೀಜಿಯವರು ತಮ್ಮ ನಿರ್ಧಾರವನ್ನು ಪ್ರಕಟಿಸಿದ ಸಮಯದಲ್ಲಿಯೇ ಅನಿರೀಕ್ಷಿತವಾದ ಘೋರಘಟನೆ ನಡೆದು ಚಳವಳಿಯ ಪ್ರಗತಿಗೆ ಅಡ್ಡಿಉಂಟಾಯಿತು. 1922 ರ ಫಬ್ರವರಿ 5 ರಂದು ಉತ್ತರ ಪ್ರದೇಶದ ಗೋರಖ್ ಪುರದ ಹತ್ತಿರದ ಚೌರಿ ಚೌರ ಎಂಬಲ್ಲಿ ಸಾಮೂಹಿಕ ಹಿಂಸಾಕೃತ್ಯಗಳು ನಡೆದವು. ಅಲ್ಲಿ ಕಾಂಗ್ರೆಸ್ ಖಿಲಾಫತ್ ಮೆರವಣಿಗೆ ಸಾಗುತ್ತಿದ್ದಾಗ ಉದ್ರಿಕ್ತ ಜನರ ಗುಂಪೊಂದು ಹಠಾತ್ತಾಗಿ 21 ಪೊಲೀಸ್ ಪೇದೆಗಳು, ಒಬ್ಬ ಸಬ್‌ಇನ್ಸ್‌ಪೆಕ್ಟರನನ್ನು ಬಲಾತ್ಕಾರವಾಗಿ ಎಳೆದು ಕೊಂಡು



ಹೊಗಿ ಹತ್ತಿರದ ಪೋಲೀಸ್ ಠಾಣೆಗೆ ದೂಡಿ ಬೆಂಕಿ ಹಚ್ಚಿದರು. ಒಳಗಿದ್ದವರೆಲ್ಲರೂ ಜೀವಂತವಾಗಿ ಸುಟ್ಟು ಹೋದರು. ಅಹಿಂಸಾ ತತ್ವದಲ್ಲಿ ಅಚಲ ನಂಬಿಕೆ ಹೊಂದಿದ್ದ ಗಾಂಧೀಜಿಯವರಿಗೆ ಚೌರಿಚೌರ ದಲ್ಲಿ ಸಂಭವಿಸಿದ ಘಟನೆ ತೀವ್ರ ಆಘಾತ ಉಂಟುಮಾಡಿತು ದೇಶದ ಇತರ ಕಡೆಗಳಲ್ಲಿಯೂ ಇದೇ ರೀತಿಯ ದುರಂತಗಳು ನಡೆಯಬಹುದೆಂಬ ಭೀತಿ ಗಾಂಧೀಜಿಯವರನ್ನು ಕಾಡಿತ್ತು. ಆದ್ದರಿಂದ ಸಾಮೂಹಿಕ ಅಹಿಂಸಾತ್ಮಕ ಸತ್ಯಾಗ್ರಹಕ್ಕೆ ದೇಶ ಸಿದ್ಧವಾಗಿಲ್ಲವೆಂದು, ಕಾಲ ಇನ್ನು ಪಕ್ವವಾಗಿಲ್ಲವೆಂದು ನಿರ್ಧರಿಸಿ ಕೊಡಲೇ ಚಳವಳಿ ನಿಲ್ಲಿಸ ಬೇಕೆಂದು ಗಾಂಧೀಜಿಯವರು ಘೋಷಿಸಿದರು. ಬೇರೆ ಮಾರ್ಗವಿಲ್ಲದೆ, ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಗಾಂಧೀಜಿಯವರ ನಿರ್ಧಾರವನ್ನು



ಅನುಮೋದಿಸಿದ್ದರಿಂದ 1922ರ ಫೆಬ್ರವರಿ 22 ರಂದು ಅಹಿಂಸಾತ್ಮಕ ಅಸಹಕಾರ ಚಳವಳಿಯ ಕೆಲವು ಕಾರ್ಯಕ್ರಮಗಳು, ಕೆಲವು ವರ್ಷಗಳ ಕಾಲ ರದ್ದಾದವು.

ಗಾಂಧೀಜಿಯವರು ಸತ್ಯಾಗ್ರಹ ಚಳವಳಿಯನ್ನು ಇದ್ದಕ್ಕಿದ್ದಂತೆ ನಿಲ್ಲಿಸುವ ತೀರ್ಮಾನ ತೆಗೆದುಕೊಂಡಿದ್ದರ ಬಗ್ಗೆ ಅನೇಕ ಕಾಂಗ್ರೆಸ್ ಮುಖಂಡರು ತಮ್ಮ ಅಶ್ಚರ್ಯ ವಿರೋಧ ವ್ಯಕ್ತಪಡಿಸಿದರು. ಒಂದು ಸ್ಥಳದಲ್ಲಿ ನಡೆದ ಹಿಂಸಾತ್ಮಕ ಕೃತ್ಯಗಳಿಗಾಗಿ ಇಡೀ ದೇಶವನ್ನೇ ಶಿಕ್ಷಿಸುವುದು ಸರಿಯಲ್ಲವೆಂದು ಟೀಕಿಸಿದರು ಮೋತಿಲಾಲ್ ನೆಹರು, ಚಿತ್ತರಂಜನ ದಾಸ್, ಲಾಲಾ ಲಜಪತರಾಯ್ ಮುಂತಾದವರು ತಮ್ಮ ಅಸಂತೋಷ ಅಸಮಾಧಾನಗಳನ್ನು ವ್ಯಕ್ತಪಡಿಸಿದರು. ಗಾಂಧೀಜಿಯವರು ಚಳವಳಿಯನ್ನು ನಿಲ್ಲಿಸಿದ್ದನ್ನು ಸುಭಾಸ್ ಚಂದ್ರ ಬೋಸರು ಅದೊಂದು ರಾಷ್ಟ್ರೀಯ ವಿಪತ್ತು ಎಂದು ಕರೆದರು. ಆದರೆ ಅನೇಕ ರಾಷ್ಟ್ರೀಯ ನಾಯಕರು ಗಾಂಧೀಜಿಯವರ ನಿರ್ಧಾರವೇ ಅಂದಿನ ಸಮಯದಲ್ಲಿ ಸೂಕ್ತವಾದುದೆಂಬ ಅಭಿಪ್ರಾಯಗಳನ್ನು ಸಹ ವ್ಯಕ್ತಪಡಿಸಿದರು. ಸರಿಯಾದ ಮತ್ತು ಸಾಕಷ್ಟು ಸಿದ್ದತೆ ಮಾಡಿಕೊಳ್ಳದೆ ಮತ್ತು ಜನರಿಗೆ ಕಾರ್ಯಕ್ರಮದ ಬಗ್ಗೆ ಹೆಚ್ಚಿನ ತರಬೇತಿ ನೀಡದೆ ಸತ್ಯಾಗ್ರಹ ಚಳವಳಿಯನ್ನು ಆರಂಭಿಸಿದ್ದು ತಾನು ಮಾಡಿದ ಹಿಮಾಲಯದಂತಹ ತಪ್ಪು ಎಂದು ಗಾಂಧೀಜಿಯವರೇ ಹೇಳಿಕೊಂಡರು.

ಈ ಚಳವಳಿಯಿಂದ ಭಾರತೀಯರು ಸ್ವರಾಜ್ಯ ಪಡೆಯಲು ಆ ಕೂಡಲೇ ಸಾಧ್ಯವಾಗಲಿಲ್ಲ. ಭಾರತೀಯರ ಸ್ಥಿತಿಗತಿಗಳನ್ನು ಸುಧಾರಿಸಲೂ ಸಹ ಸಾಧ್ಯವಾಗಲಿಲ್ಲ. ಸತ್ಯಾಗ್ರಹ ಚಳವಳಿ ನಿಲ್ಲಿಸಿದ್ದರಿಂದ ಉಂಟಾದ ಅಸಂತೋಷದಿಂದಾಗಿ ಹಿಂದೂ ಮುಸ್ಲಿಮ್ ಸಂಬಂಧಗಳಿಗೆ ಧಕ್ಕೆ ಉಂಟಾಯಿತು. ಅವರಿಬ್ಬರಲ್ಲಿ ಐಕ್ಯತೆ ಮೂಡಿಸುವ ಯಾವುದೇ ಕಾರ್ಯಕ್ರಮ ಕಂಡುಬರಲಿಲ್ಲ. ಇದೇ ಸಂದರ್ಭ ಉಪಯೊಗಿಸಿಕೊಂಡು ಹಿಂದೂ ಮುಸ್ಲಿಮರಲ್ಲಿ ವಿಷಬೀಜ ಬಿತ್ತುವವರು ಅನೇಕರಿದ್ದರು. 1923 ರಲ್ಲಿ ಅನೇಕ ಮತೀಯ ಕಲಹಗಳು ನಡೆದುವಲ್ಲದೆ, ಮತೀಯ ಕಲಹಗಳು ಕ್ರಮೇಣ ಭಾರತದ ರಾಜಕೀಯ ಜೀವನದ ಸರ್ವೇಸಾಮಾನ್ಯ ಸಂಗತಿಗಳಾದವು.

ಅಸಹಕಾರ ಚಳವಳಿ ಹೆಚ್ಚಿನ ಪ್ರಗತಿ ಸಾಧಿಸುವಲ್ಲಿ ವಿಫಲವಾದರೂ, ಅದು ಅನೇಕ ಉತ್ತಮ ಬೆಳವಣಿಗೆಗಳಿಗೆ ನಾಂದಿಯಾಯಿತು. ಮಹಾತ್ಮ ಗಾಂಧೀಜಿಯವರ ನಾಯಕತ್ವದಲ್ಲಿ ನಡೆದ ಅಸಹಕಾರ ಚಳವಳಿ ಬ್ರಿಟಿಷ್ ಪ್ರಭುತ್ವದ ಮೇಲೆ ವಿಶಿಷ್ಟ ಪರಿಣಾಮ ಬೀರಿತಲ್ಲದೆ, ಭಾರತ ಸ್ವಾತಂತ್ರ ಹೋರಾಟದ ಚರಿತ್ರೆಯಲ್ಲಿನ ಒಂದು ಪ್ರಮುಖ ಮೈಲಿಗಲ್ಲಾಯಿತು. ಅಸಹಕಾರ ಚಳವಳಿ ಬ್ರಿಟೀಷರ ವಿರುದ್ದದ ಒಂದು ಕ್ರಾಂತಿಕಾರಿ, ನೇರ ಹಾಗೂ ದಿಟ್ಟ ಹೆಜ್ಜೆಯಾಗಿತ್ತು. ಈ ಚಳವಳಿಯಿಂದಾಗಿ ಭಾರತ ಸ್ವಾತಂತ್ರ್ಯ ಹೋರಾಟ ಜನಾಂದೋಳನವಾಗಿ ಬೆಳೆಯಿತು. ಗಾಂಧೀಜಿಯವರ ಅನುಯಾಯಿಗಳು ದೂರದ ನಗರ, ಪಟ್ಟಣ ಮತ್ತು ಗ್ರಾಮಾಂತರ ಪ್ರದೇಶಗಳಿಗೆ ತೆರಳಿ ಅಸಹಕಾರ ಚಳವಳಿಯ ಸಂದೇಶಗಳನ್ನು ಜನಸಾಮಾನ್ಯರಿಗೆ ತಲುಪಿಸಿದರು. ಅನೇಕ ವರ್ಷಗಳಿಂದ ಕೆಲವೇ ವಿದ್ಯಾವಂತ ವ್ಯಕ್ತಿಗಳಿಗೆ ಮಾತ್ರ ಸೀಮಿತಗೊಂಡಿದ್ದ ರಾಷ್ಟ್ರೀಯ ಚಳವಳಿ ಮೊದಲ ಬಾರಿಗೆ ಜನತೆಯ ಸ್ವಾತಂತ್ರ ಹೋರಾಟವಾಗಿ ಪರಿವರ್ತಿತವಾಯಿತು. ಮೊತ್ತಮೊದಲ ಬಾರಿಗೆ ಶ್ರೀಮಂತರು, ಬಡವರು, ವಿದ್ಯಾವಂತರು, ಅನಕ್ಷರಸ್ಥರು,



ಕಾರ್ಮಿಕರು, ರೈತರು ವಿದ್ಯಾರ್ಥಿಗಳು, ವ್ಯಾಪಾರಿಗಳು, ಹೀಗೆ ಎಲ್ಲ ವರ್ಗದ ಜನರು ಹೊಸ ಉತ್ಸಾಹ ಚೈತನ್ಯಗಳಿಂದ ಗಾಂಧೀಜಿಯವರ ನಾಯಕತ್ವದಲ್ಲಿ ರಾಷ್ಟ್ರದ ಬಿಡುಗಡೆಗಾಗಿ ಹೋರಾಟ ನಡೆಸುವಂತಾಯಿತು. ಇದರ ಜೊತೆಗೆ ಅಸಹಕಾರ ಚಳವಳಿಯಿಂದಾಗಿ ಕಾಂಗ್ರೆಸ್ಸಿಗೆ ಒಂದು ನಿರ್ದಿಷ್ಟ ಗುರಿ ಮತ್ತು ಮಾರ್ಗದರ್ಶನ ದೊರೆಯಿತು. ಕಾಂಗ್ರೆಸ್ ವ್ಯವಸ್ಥಿತವಾದ ಮತ್ತು ಜನಸಂಸ್ಥೆಯಾಗಿ ಬೆಳೆಯಲು ಸಾಧ್ಯವಾಯಿತು. ಎಲ್ಲಕ್ಕಿಂತ ಮಿಗಿಲಾಗಿ ಗಾಂಧೀಜಿಯವರು ಭಾರತದ ಜನರಲ್ಲಿ ಆತ್ಮಗೌರವ ಆತ್ಮವಿಶ್ವಾಸಗಳನ್ನು ಮೂಡಿಸಿ ಎಲ್ಲ ರೀತಿಯ ತ್ಯಾಗ ಬಲಿದಾನಗಳಿಗೆ ಜನರನ್ನು ಸಿದ್ಧಗೊಳಿಸಿ ಸ್ಫೂರ್ತಿಯ ಚಿಲುಮೆಯಾದದ್ದು ಅಸಹಕಾರ ಚಳವಳಿ ತಾತ್ಕಲಿಕವಾಗಿ ರದ್ದಾದರೂ, ರಾಷ್ಟ್ರೀಯತೆಯ ಸ್ವಾತಂತ್ರ್ಯದ ಜ್ಯೋತಿ ಪ್ರಜ್ವಲಿಸುತ್ತಲೇ ಇತ್ತು.

**ಸ್ವರಾಜ್ಯ ಪಕ್ಷ ಸ್ಥಾಪನೆ:**

ಅಸಹಕಾರ ಚಳವಳಿ ರದ್ದಾದನಂತರ, ಗಾಂಧೀಜಿಯವರು ಸೇರಿದಂತೆ ರಾಷ್ಟ್ರದ ಅನೇಕ ಮುಖಂಡರು ಇವುಗಳನ್ನು ಸರ್ಕಾರ ಸೆರೆಮನೆಗೆ ತಳ್ಳಿತು ಮುಖಂಡರಿಲ್ಲದೆ ಕಾರ್ಯಕ್ರಮವಿಲ್ಲದೆ ಒಂದು ರೀತಿಯ ಶೂನ್ಯತೆ ಆವರಿಸಿತು ಅಂತಹ ಸಮಯದಲ್ಲಿ ಕಾಂಗ್ರೆಸ್ಸಿನ ಚಿತ್ತರಂಜನದಾಸ್ ಎನ್.ಸಿ.ಕೇಲ್ಕರ್ ಮೋತಿಲಾಲ್ ನ್ನೆಹರು ಮುಂತಾದವರು ಹೊಸ ಮಾರ್ಗ ಕುರಿತು ಸಮಾಲೋಚನೆ ನಡೆಸಿ ಕಾಂಗ್ರೆಸ್ ಒಳಗೆನೇ ಒಂದು ಹೊಸ ಪಕ್ಷ ರಚಿಸುವ ಪ್ರಯತ್ನ ಮಾಡಿದರು. ಅದರಂತೆ ಚಿತ್ತರಂಜನ್ ದಾಸ್ ಹಾಗೂ ಮೋತಿಲಾಲ್ ನೆಹರು ಅವರ ನೇತೃತ್ವದಲ್ಲಿ 1923ರ ಜನವರಿ ಒಂದರಂದು ಸ್ವರಾಜ್ (ಅಥವಾ ಸ್ವರಾಜ್ಯ) ಪಕ್ಷದ ಸ್ಥಾಪನೆಯಾಯಿತು. ಸ್ವರಾಜ್ ಪಕ್ಷದ ತತ್‌ಕ್ಷಣದ ಗುರಿ ಎಂದರೆ ಸ್ವರಾಜ್ಯ ಅಥವಾ ಡೋಮೀನಿಯನ್ ಸ್ಥಾನಮಾನಗಳನ್ನು ಗಳಿಸುವುದಾಗಿತ್ತು. ಸ್ವರಾಜ್ ಪಕ್ಷದ ಕಾರ್ಯಕ್ರಮವೆಂದರೆ ಶಾಸನ ಸಭೆಗಳಿಗೆ ನಡೆಯುವ ಚುನಾವಣೆಗಳಲ್ಲಿ ಸ್ಪರ್ಧಿಸಿ ಅಧಿಕ ಸಂಖ್ಯೆಯಲ್ಲಿ ಚುನಾಯಿತರಾಗಿ, ರಾಜ್ಯಾಂಗ ಸುಧಾರಣೆಗಳನ್ನು ಒಳಗಿನಿಂದಲೇ ನಿರಂತರವಾಗಿ ಹಾಗೂ ದೃಢವಾಗಿ ಅಡಚಣೆಗಳನ್ನುಂಟುಮಾಡಿ ಸರ್ಕಾರದ ಕೆಲಸಗಳನ್ನು ಸ್ಥಗಿತಗೊಳಿಸಿ, ಸರ್ಕಾರಕ್ಕೆ ಕಿರಿ ಕಿರಿ ಉಂಟು ಮಾಡುವುದಾಗಿತ್ತು. ಆ ಮೂಲಕ ಬ್ರಿಟಿಷ್ ಪ್ರಭುತ್ವವನ್ನು ಇಕ್ಕಟ್ಟಿಗೆ ಸಿಕ್ಕಿಸುವುದು ಪಕ್ಷದ ಉದ್ದೇಶವಾಗಿತ್ತು. 1924ರ ವೇಳೆಗೆ ಗಾಂಧೀಜಿಯವರೂ ಸಹ ಸ್ವರಾಜ್ ಪಕ್ಷದ ಸದಸ್ಯರ ಚಟುವಟಿಕೆಗಳಿಗೆ ಬೆಂಬಲ ನೀಡಿದ್ದರು. ಆದರೆ ಸ್ವರಾಜ್ ಪಕ್ಷ ಮಾತ್ತು ಸಂಸ್ಥೆ ಕಾಂಗ್ರೆಸ್ಸಿನ ಒಂದು ಅಂಗವಾಗಿ ಮತ್ತು ಕಾಂಗ್ರೆಸ್ಸಿನ ಸಹಯೋಗದೊಂದಿಗೆ ಕೆಲಸ ಮಾಡಬೇಕಾಗಿತ್ತು. ಸ್ವರಾಜ್ ಪಕ್ಷವು ಮೊದಲಲ್ಲಿ ಸರ್ಕಾರದ ಕೆಲಸ ಕಾರ್ಯಗಳಿಗೆ ಅಡ್ಡಿ ಉಂಟುಮಾಡುವುದರ ಮೂಲಕ ಸ್ವಲ್ಪ ಮಟ್ಟಿನ ಯಶಸ್ಸು ಪಡೆಯಿತಾದರು, ಅದು ತನ್ನ ಪ್ರಧಾನ ಗುರಿ ಮುಟ್ಟುವಲ್ಲಿ ವಿಫಲವಾಯಿತು, ಕೆಲವು ವರ್ಷಗಳ ನಂತರ ಸ್ವರಾಜ್ ಪಕ್ಷವು ತನ್ನ ಉತ್ಸಾಹ ಕಳೆದುಕೊಂಡು ಸರ್ಕಾರದೊಡನೆ ಜವಾಬ್ದಾರಿಯುತವಾದ ಸಹಕಾರದ ನೀತಿ ಅನುಸರಿಸಿತು. ಸ್ವರಾಜ್ ಪಕ್ಷದ ಈ ನೀತಿಯಿಂದಾಗಿ ಜನರಿಗೆ ಪಕ್ಷದ ಬಗ್ಗೆ ಇದ್ದ ಗೌರವ ಕಡಿಮೆಯಾಯಿತು. ಅದೂ ಅಲ್ಲದೆ 1925ರಲ್ಲಿ (ಜೂನ್) ಪಕ್ಷದ ಪ್ರಮುಖರಲ್ಲಿ ಒಬ್ಬರಾಗಿದ್ದ



ಚಿತ್ತರಂಜನದಾಸ್ ಅವರು ಕಾಲವಾದಾಗ ಸ್ವರಾಜ್ ಪಕ್ಷವು ವಾಸ್ತವವಾಗಿ ತುಂಬಾ ದುರ್ಬಲವಾಯಿತು. 1926 ಚುನಾವಣೆಗಳಲ್ಲಿ ಸ್ವರಾಜ್ ಪಕ್ಷ ಹೀನಾಯ ಸೋಲು ಅನುಭವಿಸಿದ್ದರಿಂದ ಅದು ತನ್ನ ಅವಸಾನ ಕಂಡು ಕೊಂಡಿತು.

ಸ್ವರಾಜ್ ಪಕ್ಷ ತನ್ನ ಗುರಿ ಮುಟ್ಟುವಲ್ಲಿ ಯಶಸ್ಸುಗಳಿಸಲು ಸಾಧ್ಯವಾಗದಿದ್ದರೂ, ಅದು ಭಾರತದ ರಾಷ್ಟ್ರೀಯ ಚಳವಳಿಗೆ ತನ್ನದೇ ಆದ ರೀತಿಯಲ್ಲಿ ತನ್ನ ಕೊಡುಗೆ ನೀಡಿತೆಂಬುದನ್ನು ಯಾರಾದರೂ ಒಪ್ಪಲೇಬೇಕು. ಇದ್ದಕ್ಕಿದ್ದಂತೆ ಅಸಹಕಾರ ಚಳವಳಿ ರದ್ದಾದಾಗ ಉಂಟಾದ ಶೂನ್ಯತೆಯನ್ನು ಸ್ವರಾಜ್ ಪಕ್ಷ ಸಮರ್ಥವಾಗಿ ಅಳಿಸಿಹಾಕಿತು. ಜನರ ಉತ್ಸಾಹವನ್ನು ಸ್ವಲ್ಪ ಕಾಲದವರೆಗಾದರೂ ಉಳಿಸಿಕೊಂಡಿತು. ಬ್ರಿಟಿಷ್ ಸರ್ಕಾರವು ಭಾರತದಲ್ಲಿ ರಾಜ್ಯಾಂಗ ಸುಧಾರಣೆಯ ಬಗ್ಗೆ ತನ್ನ ಧೋರಣೆಯನ್ನು ಬದಲಾಯಿಸಿಕೊಳ್ಳುವಂತೆ ಮಾಡಿತು. 1925 ರಲ್ಲಿ ಸ್ವರಾಜ್ ಪಕ್ಷವು ಕೇಂದ್ರ ಶಾಸನ ಸಭೆಯಲ್ಲಿ ಭಾರತದಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪಿಸುವುದರ ಬಗ್ಗೆ ನಿರ್ಣಯವೊಂದನ್ನು ಮಂಡಿಸಿತ್ತು. ಹೀಗೆ ಸ್ವರಾಜ್ ಪಕ್ಷವು ಭಾರತದ ಸ್ವತಂತ್ರ ಹೋರಾಟ ಮತ್ತು ರಾಜ್ಯಾಂಗದ ಬೆಳವಣಿಗೆಗೆ ತನ್ನದೇ ಕೊಡುಗೆಗಳನ್ನು ಸಲ್ಲಿಸಿದೆ.

**ಸೈಮನ್ ಆಯೋಗ**

1919 ರ ಮಾಂಟೆಗೂ ಚೆಲ್ಮ್ಸ್ ಫರ್ಡ ಅಥವಾ ಮಾಂಟಫರ್ಡ ಸುಧಾರಣೆಗಳು ಭಾರತದಲ್ಲಿ ಹೇಗೆ ಕೆಲಸ ನಿರ್ವಹಿಸುತ್ತಿವೆ ಎಂಬುದನ್ನು ಅಧ್ಯಯನ ಮಾಡಿ ವರದಿಯೊಂದನ್ನು ಸಲ್ಲಿಸಲು ಬ್ರಿಟಿಷ್ ಸರ್ಕಾರ 1927ರ ನವೆಂಬರ್ 26 ರಂದು ಸೈಮನ್ ಆಯೋಗ ರಚಿಸಿತು. ಸರ್‌ಜಾನ್ ಸೈಮನ್ ಸೇರಿದಂತೆ ಅವನ ನೇತೃತ್ವದ ಈ ಸಮಿತಿಯು ಬ್ರಿಟಿಷ್ ಪಾರ್ಲಿಮೆಂಟಿನ ಏಳು ಸದಸ್ಯರನ್ನು ಒಳಗೊಂಡಿತ್ತು. ಈ ಸಮಿತಿಯ ಎಲ್ಲ ಸದಸ್ಯರು ಬ್ರಿಟೀಷರೇ ಆಗಿದ್ದುದರಿಂದ 1927ರ ಡಿಸೆಂಬರ್‌ನಲ್ಲಿ ಕಾಂಗ್ರೆಸ್ ಒಂದು ನಿರ್ಣಯ ಕೈಗೊಂಡು ಸೈಮನ್ ಆಯೋಗವನ್ನು ಎಲ್ಲ ಹಂತ ಮತ್ತು ರೂಪದಲ್ಲಿ ಬಹಿಷ್ಕರಿಸಲು ನಿರ್ಧರಿಸಿತು. ಕಾಂಗ್ರೆಸ್ಸಿನ ಮಂದಗಾಮಿಗಳು ಸರ್ ತೇಜ್ ಬಹದ್ದೂರ್ ತೀವ್ರಗಾಮಿಗಳು ಮೋತಿಲಾಲ್ ನೆಹರೂ ಅವರ ನಾಯಕತ್ವದಲ್ಲಿ ಸೈಮನ್ ಆಯೋಗವನ್ನು ಬಹಿಷ್ಕರಿಸಿದರು. 1928ರ ಫೆಬ್ರವರಿಯಲ್ಲಿ ಸೈಮನ್ ಆಯೋಗ ಬಾಂಬೆಗೆ ಬಂದಾಗ ಅದರ ವಿರುದ್ಧ ಹರತಾಳ ಆಚರಿಸಲಾಯಿತು. ಸೈಮನ್ ಆಯೋಗ ಹೋದ ಕಡೆಯಲ್ಲೆಲ್ಲ ಕಪ್ಪುಬಾವುಟ ಪ್ರದರ್ಶಿಸಿ ದೇಶದಾದ್ಯಂತ ಹರತಾಳ ಆಚರಿಸಿ ಸೈಮನ್ ಹಿಂದಿರುಗು ಎಂಬ ಘೋಷಣೆ ಕೂಗಲಾಯಿತು. ದ್ವೇಷ ಅಸೂಯೆ, ಭೀತಿ, ಅಪನಂಬಿಕೆಗಳ ವಾತಾವರಣದಲ್ಲಿ ಎರಡು ವರ್ಷಗಳ ಕಾಲ ತನ್ನ ಕೆಲಸ ನಿರ್ವಹಿಸಿದ ಸೈಮನ್ ಆಯೋಗ 1930ರ ಮೇ ತಿಂಗಳಲ್ಲಿ ಭಾರತಕ್ಕೆ ಹೊಸ ರಾಜ್ಯಾಂಗ ಕುರಿತ ಒಂದು ವರದಿ ಸಲ್ಲಿಸಿತು. ಸೈಮನ್ ಆಯೋಗದ ಕೆಲವು ಪ್ರಮುಖ ಶಿಫಾರಸುಗಳೆಂದರೆ 1). ವಿಸ್ತೃತ ಮತಾಧಿಕಾರದ ಆಧಾರದ ಮೇಲೆ ಪ್ರಾಂತ್ಯಗಳಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರದ ರಚನೆ 2) ಬ್ರಿಟಿಷ್ ಭಾರತ ಮತ್ತು ಭಾರತದ ರಾಜರುಗಳ ರಾಜ್ಯಗಳು ಸೇರಿದಂತೆ ಒಂದು ಸಂಯುಕ್ತ ಸರ್ಕಾರದ ಸ್ಥಾಪನೆ 3) ಸೇನೆಯನ್ನು



ಭಾರತೀಕರಣಗೊಳಿಸುವ ಬೇಡಿಕೆಗೆ ಮಾನ್ಯತೆ ಇದ್ದರೂ, ಬ್ರಿಟಿಷ್ ಸೇನೆಗಳು ಅಧಿಕಾರಿಗಳು ಇನ್ನು ಕೆಲವಾರು ವರ್ಷಗಳು ಭಾರತದಲ್ಲಿರತಕ್ಕದ್ದು 4) ಗೌರ್‍ನರ್ ಜನರಲ್ ತನ್ನ ಸಚಿವ ಸಂಪುಟದ ಸದಸ್ಯರನ್ನು ತಾನೇ ಆರಿಸಿಕೊಳ್ಳತಕ್ಕದ್ದು. ಆದರೆ ಭಾರತೀಯ ಸದಸ್ಯರನ್ನು ಒಳಗೊಂಡಿರದ ಸೈಮನ್ ಆಯೋಗವನ್ನು ಭಾರತದ ಎಲ್ಲ ರಾಜಕೀಯ ಮುಖಂಡರು, ಪಕ್ಷಗಳು ಖಂಡಿಸಿ ಬಹಿಷ್ಕರಿಸಿದರು. ಭಾರತೀಯರಾರನ್ನು ಸೈಮನ್ ಆಯೋಗದಲ್ಲಿ ಸೇರಿಸಿಕೊಳ್ಳದೆ ಬ್ರಿಟಿಷ್ ಸರ್ಕಾರ ದೊಡ್ಡ ತಪ್ಪು ಮಾಡಿತು ಎಂಬುದು ಡಾ॥ ಎ.ಬಿ.ಕಿರಣ್ ಅವರ ಅಭಿಪ್ರಾಯವಾಗಿತ್ತು. ಸೈಮನ್ ಆಯೋಗ ಭಾರತ ವಿವಿದ ಭಾಗಗಳಲ್ಲಿ ಸಂಚರಿಸಿ ತನ್ನ ಕೆಲಸ ಮುಗಿಸಿ 1929 ರ ಏಪ್ರಿಲ್ 14 ರಂದು ಇಂಗ್ಲೆಂಡಿಗೆ ಹಿಂದಿರುಗಿತು. ಸೈಮನ್ ಆಯೋಗ ತನ್ನ ವರದಿಯನ್ನು 1930 ರ ಮೇ ನಲ್ಲಿ ಬ್ರಿಟೀಷ್ ಸರ್ಕಾರಕ್ಕೆ ಸಲ್ಲಿಸಿತು. ಸೈಮನ್ ಆಯೋಗದ ವರದಿಯು ಕೆಲವು ಉತ್ತಮ ಅಂಶಗಳನ್ನು ಹೊಂದಿದ್ದು 1935 ರ ಭಾರತ ಸರ್ಕಾರ ಕಾಯಿದೆಯೂ ಜಾರಿಗೆ ತಂದ ಸಂವಿದಾನ ಸುಧಾರಣೆಗಳಿಗೆ ಬುನಾದಿಯಾದವು.

**ನೆಹರೂ ವರದಿ:**

ಸರ್ಕಾರದ ಎಲ್ಲ ಹಂತಗಳಲ್ಲಿ ಬ್ರಿಟೀಷ್ ಅಧಿಕಾರ ಮುಂದುವರೆದದನ್ನು ಗಾಂಧೀಜಿ ಮುಂತಾದ ಅನೇಕ ರಾಷ್ಟ್ರೀಯ ನಾಯಕರು ಖಂಡಿಸಿದರು. ಭಾರತೀಯರ ಆಶೋತ್ತರಗಳಿಗೆ ವಿರುದ್ಧವಾಗಿ ಅವರ ಮೇಲೆ ರಾಜ್ಯಾಂಗವೊಂದನ್ನು ಹೇರುವ ಯಾವುದೇ ಅಧಿಕಾರ ಹಕ್ಕು ಬ್ರಿಟೀಷರಿಗಿಲ್ಲ ಎಂದು ಮೋತಿಲಾಲ್ ನೆಹರುವರು ಗುಡುಗಿದರು. ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವ ಹಕ್ಕು ಭಾರತೀಯರಿಗೆ ಮಾತ್ರ ಇದೆಯೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು. ಭಾರತದ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದ ಲಾರ್ಡಖರ್ಜನ್ ಸೈಮನ್ ಆಯೋಗದಲ್ಲಿ ಭಾರತೀಯ ಸದಸ್ಯರಿಲ್ಲದುದನ್ನು ಸಮರ್ಥಿಸಿಕೊಂಡನಲ್ಲದೆ, ಎಲ್ಲ ಪಕ್ಷಗಳಿಗೆ ಒಪ್ಪಿಗೆಯಾಗುವಂತಹ ಸಂವಿಧಾನ ರಚಿಸುವ ಅರ್ಹತೆ ಸಾಮರ್ಥ್ಯ ಭಾರತೀಯರಿಗಿಲ್ಲವೆಂದು ಭಾರತದ ರಾಜಕಾರಣಿಗಳನ್ನು ಮೂದಲಿಸಿದ. ಭಾರತದ ರಾಷ್ಟ್ರೀಯ ನಾಯಕರಿಗೆ ಇದೊಂದು ಸವಾಲಾಯಿತು. ಆದ್ದರಿಂದ ಭಾರತಕ್ಕೆ ಹೊಸ ರಾಜ್ಯಂಗವೊಂದನ್ನು ರಚಿಸುವ ಪ್ರಶ್ನೆಯನ್ನು ಪರಿಶೀಲಿಸಲು, ಕಾಂಗ್ರೆಸ್ ನೇತೃತ್ವದಲ್ಲಿ 1928 ಫೆಬ್ರವರಿ ಮಾರ್ಚಿಯಲ್ಲಿ ದೆಹಲಿಯಲ್ಲಿ ಅಖಿಲ ಭಾರತ ಸರ್ವಪಕ್ಷಗಳ ಸಮ್ಮೇಳನ ನಡೆಯಿತು. ದೇಶದ ವಿವಿದ ಪಕ್ಷಗಳ ಪಂಗಡಗಳ ಧುರೀಣರನ್ನು ಒಳಗೊಂಡ ಒಂದು ಸಮಿತಿಯನ್ನು (ಎಂಟು ಸದಸ್ಯರು) ಮೋತಿಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ರಚಿಸಲಾಯಿತು. ಈ ನೆಹರು ಸಮಿತಿ ಮೂರು ತಿಂಗಳ ಕಾಲ ಕೆಲಸ ಮಾಡಿ ಒಂದು ವರದಿಯನ್ನು ಸಿದ್ಧಗೊಳಿಸಿತು. ಈ ವರದಿ 'ನೆಹರೂ ವರದಿ' ಎಂದು ಹೆಸರು ಪಡೆಯಿತು. ನೆಹರು ವರದಿಯ ಕೆಲವು ಪ್ರಮುಖ ಶಿಪಾರಸುಗಳೆಂದರೆ

1). ಬ್ರಿಟೀಷರು ಈ ಕೂಡಲೇ ಭಾರತಕ್ಕೆ ಡೊಮಿನಿಯನ್ ಅಂತಸ್ತು ನೀಡಬೇಕು 2). ಕೇಂದ್ರ ಮತ್ತು ಪ್ರಾಂತ್ಯಗಳಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರಗಳನ್ನು ಸ್ಥಾಪಿಸಬೇಕು. 3) ಭಾರತದ ರಾಜ್ಯಾಂಗ ಫೆಡರಲ್ ಮಾದರಿಯಾಗಿರಬೇಕು. 4) ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳನ್ನು ಒಳಗೊಂಡಂತೆ



ಹತ್ತೊಂಬತ್ತು ಮೂಲಭೂತ ಹಕ್ಕುಗಳನ್ನು ಭಾರತೀಯರಿಗೆ ನೀಡಬೇಕು.

ಮೋತಿಲಾಲ್ ನೆಹರೂ ಸಮಿತಿ ತನ್ನ ವರದಿಯನ್ನು 1928 ರ ಜುಲೈನಲ್ಲಿ ಸಲ್ಲಿಸಿತು ಮತ್ತು ಕಾಂಗ್ರೆಸ್ ಅದಕ್ಕೆ ತನ್ನ ಒಪ್ಪಿಗೆ ಸೂಚಿಸಿತು. 1928ರಲ್ಲಿ ಮೋತಿಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ಕಲ್ಕತ್ತದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ 1929ರ ಡಿಸೆಂಬರ್ ಒಳಗೆ ಬ್ರಿಟೀಷರು ನೆಹರು ವರದಿಯನ್ನು ಒಪ್ಪಿಕೊಳ್ಳಬೇಕೆಂದು, ಆ ಅವಧಿಯೊಳಗೆ ಒಪ್ಪಿಕೊಳ್ಳದಿದ್ದರೆ ಕಾಂಗ್ರೆಸ್ ಅಹಿಂಸಾತ್ಮಕ ಅಸಹಕಾರ ಚಳವಳಿಯನ್ನು ಸಂಘಟಿಸುವುದಾಗಿ ಘೋಷಿಸಿತು.

ಮೋತಿಲಾಲ್ ನೆಹರು ವರದಿಯ ಕೆಲವು ಅಂಶಗಳ ಬಗ್ಗೆ ಮುಸ್ಲಿಮ್ ನಾಯಕರಲ್ಲಿ ಮಿಶ್ರ ಪ್ರತಿಕ್ರಿಯೆ ಕಂಡು ಬಂದಿತು. ಮೌಲಾನ ಅಜಾದ್ ಮತ್ತು ಡಾ|| ಅನ್‌ಸಾರಿ ಅವರ ನೇತೃತ್ವದಲ್ಲಿ ರಾಷ್ಟ್ರೀಯ ಮುಸ್ಲಿಮರು ನೆಹರೂ ವರದಿಯನ್ನು ತುಂಬು ಹೃದಯದಿಂದ ಬೆಂಬಲಿಸಿದರೆ, ಜಿನ್ನಾ, ಅಗಾಖಾನ್, ಮಹಮ್ಮದ್‌ರಫಿ ಮುಂತಾದ ಮುಸ್ಲಿಮ್ ನಾಯಕರು ನೆಹರು ವರದಿಯನ್ನು ತಿರಸ್ಕರಿಸಿದರು. ಜಿನ್ನಾ 1929ರ ನಂತರ ಕಾಂಗ್ರೆಸ್ಸಿನಿಂದ ದೂರಸರಿದು, ಭಾರತದಲ್ಲಿ ಮುಸ್ಲಿಮರಿಗೆ ಪ್ರತ್ಯೇಕ ರಾಷ್ಟ್ರ ನಿರ್ಮಾಣವಾಗಬೇಕೆಂದು ವಾದಿಸುತ್ತ ಮತ್ತು ಅದಕ್ಕಾಗಿ ತಮ್ಮ ಹೋರಾಟ ಮುಂದುವರೆಸಿದರು.

**ಉಪ್ಪಿನ ಸತ್ಯಾಗ್ರಹ ಕಾನೂನು ಭಂಗ ಚಳವಳಿ:**

ನೆಹರೂ ವರದಿಯನ್ನು ಬ್ರಿಟೀಷ್ ಸರ್ಕಾರ ಕಡೆಗಣಿಸಿದ್ದರಿಂದ ಕಾಂಗ್ರೆಸ್ ಮುಖಂಡರಿಗೆ ಹೆಚ್ಚಿನ ಅಸಮಾದಾನವಾಗಿತ್ತು. 1929 ರ ಮಧ್ಯ ಭಾಗದಲ್ಲಿ ರಾಮಸೆಮಾಕ್ಡೊನಾಲ್ಡ ಅವನ ನಾಯಕತ್ವದ ಲೇಬರ್ ಪಕ್ಷ ಬ್ರಿಟನ್ನಿನಲ್ಲಿ ಅಧಿಕಾರ ವಹಿಸಿಕೊಂಡಿತು. ಬ್ರಿಟನ್ನಿನ ಹೊಸ ಸರ್ಕಾರ ಭಾರತದ ವೈಸ್‌ರಾಯ್‌ಲಾರ್ಡ್ ಇರ್ವಿನ್ ಅವನನ್ನು ಇಂಗ್ಲಂಡಿಗೆ ಕರೆಸಿಕೊಂಡು ಭಾರತದಲ್ಲಿನ ಬೆಳವಣಿಗೆಗಳ ಬಗ್ಗೆ ಚರ್ಚಿಸಿತು. ಲಾರ್ಡ್ ಇರ್ವಿನ್ 1929 ರ ಅಕ್ಟೋಬರ್ 31 ರಂದು ಡೊಮಿನಿಯನ್ ಅಂತಸ್ತಿನ ಬಗ್ಗೆ ಒಂದು ಹೇಳಿಕೆ ನೀಡಿದ. ಆಂತರಿಕ ಸ್ವಾಯತ್ತತೆಯನ್ನು ಗಳಿಸಿಕೊಡುವುದು ಭಾರತದ ರಾಜ್ಯಾಂಗದ ಬೆಳವಣಿಗೆಯ ಸ್ವಾಭಾವಿಕ ಉದ್ದೇಶ ಎಂಬುವುದು ಅವನ ಹೇಳಿಕೆಯ ಪ್ರಮುಖ ಅಂಶವಾಗಿತ್ತು. ಅಲ್ಲದೆ ಭಾರತದ ರಾಜಕೀಯ ಸಮಸ್ಯೆಗಳನ್ನು ಬಗೆಹರಿಸಲು ಬ್ರಿಟೀಷ್ ಸರ್ಕಾರವು ಸರ್ವಪಕ್ಷಗಳ ದುಂಡುಮೇಜಿನ ಸಭೆಯನ್ನು ಲಂಡನ್ನಿನಲ್ಲಿ ಏರ್ಪಡಿಸಲಾಗುವುದೆಂದು ಇರ್ವಿನ್ ಹೇಳಿದ.

ಮಹಾತ್ಮಗಾಂಧೀಜಿ, ಮೋತಿಲಾಲ್ ನೆಹರು, ಸರ್ದಾರ್‌ವಲ್ಲಭಬಾಯಿ ಪಟೇಲ್ ಮುಂತಾದ ರಾಷ್ಟ್ರೀಯ ನಾಯಕರು, ವೈಸರಾಯ್ ಇರ್ವಿನ್ನನ ಹೇಳಿಕೆಯ ಬಗ್ಗೆ ತಮ್ಮ ಅಸಮಾದಾನ ವ್ಯಕ್ತಪಡಿಸಿ ಅದೊಂದು ಕಣ್ಣು ಒರೆಸುವ ತಂತ್ರವೆಂದು ಭಾವಿಸಿದರು. ಕಾಂಗ್ರೆಸ್‌ನ ಎಡಪಂಥೀಯ ಪ್ರವೃತ್ತಿಯ ಜವಹರ್ ಲಾಲ್ ನೆಹರೂ, ಸುಭಾಸ್ ಚಂದ್ರ ಬೋಸ್, ಶ್ರೀನಿವಾಸ ಅಯ್ಯಂಗಾರ್ ಮುಂತಾದವರು ಬ್ರಿಟೀಷ್ ವಿರುದ್ಧ ನೇರವಾದ, ದೃಢವಾದ, ಸತ್ವಯುತವಾದ ಹೋರಾಟಕ್ಕೆ ಸಿದ್ಧರಾಗಬೇಕೆಂದು ಕರೆ ಇತ್ತರು.

1929 ರ ಡಿಸೆಂಬರ್‌ನಲ್ಲಿ ಜವಹರಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿನ ಲಾಹೋರ್ ಕಾಂಗ್ರೆಸ್



ಅಧಿವೇಶನದಲ್ಲಿ 'ಪೂರ್ಣಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯ' ಕಾಂಗ್ರೆಸ್ಸಿನ ಅಂತಿಮ ಗುರಿ ಎಂಬ ನಿರ್ಣಯ ಕೈಗೊಳ್ಳಲಾಯಿತು. ಕಾಂಗ್ರೆಸ್ ಸಮಿತಿ ಗಾಂಧೀಜಿಯವರ ನೇತೃತ್ವದಲ್ಲಿ ಕಾನೂನು ಭಂಗ ಅಸಹಕಾರ ಚಳವಳಿ ಆರಂಭಿಸಲು ಸಹ ಒಂದು ನಿರ್ಣಯ ಕೈಗೊಳ್ಳಲಾಯಿತು. 1929 ರ ಡಿಸೆಂಬರ್ 31 ರ ಮಧ್ಯರಾತ್ರಿ ರಾಷ್ಟ್ರಧ್ವಜ ಹಾರಿಸಿ, ಸಂಪೂರ್ಣ ಸ್ವರಾಜ್ಯ ತಮ್ಮ ಗುರಿ ಮತ್ತು ಅದಕ್ಕೆ ಎಲ್ಲರೂ ಕಂಕಣಬದ್ಧರಾಗಬೇಕೆಂದು ಘೋಷಿಸಲಾಯಿತು. ಪ್ರತಿ ವರ್ಷದ ಜನವರಿ 26 ರಂದು ದೇಶಾದ್ಯಂತ ಪೂರ್ಣಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯ ದಿನವನ್ನಾಗಿ ಆಚರಿಸಲು ನಿರ್ಧರಿಸಲಾಯಿತು.

ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯಗಳಂತೆ 1930 ಫೆಬ್ರವರಿಯಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಬರಮತಿಯಲ್ಲಿ ಸಭೆ ಸೇರಿ ದೇಶಾದ್ಯಂತ ಕಾನೂನುಭಂಗ ಅಸಹಕಾರ ಚಳವಳಿ ಆರಂಭಿಸಲು ಗಾಂಧೀಜಿಯವರಿಗೆ ಸಂಪೂರ್ಣ ಅಧಿಕಾರ ನೀಡಿತು. ಸಮುದ್ರದ ನೀರಿನಿಂದ ಉಪ್ಪಿನ ಉತ್ಪಾದನೆಯ ಮೇಲೆ ನಿರ್ಬಂಧ ಹಾಕಿರುವುದರಿಂದ ಮತ್ತು ಬಡ ಜನತೆಯ ಮೇಲೆ ಹಾಕಿದ್ದ ಉಪ್ಪಿನ ತೆರಿಗೆಯ ಬಗ್ಗೆ ಇದ್ದ ಅತೃಪ್ತಿಯನ್ನು ಗಮನಿಸಿ ಗಾಂಧೀಜಿಯವರು ಉಪ್ಪಿನ ತೆರಿಗೆಯ ವಿರುದ್ಧ ಚಳವಳಿ ನಡೆಸಲು ನಿರ್ಧರಿಸಿದರು. ಗಾಂಧೀಜಿಯವರ ಈ ಚಳವಳಿ ಉಪ್ಪಿನ ಸತ್ಯಾಗ್ರಹ ಎಂದು ಖ್ಯಾತಿ ಪಡೆಯಿತು. ಸರ್ಕಾರವು ಉಪ್ಪು ತಯಾರಿಕೆಯ ಮೇಲೆ ವಿಧಿಸಿದ್ದ ನಿರ್ಬಂಧವನ್ನು ಮುರಿದು, ಉಪ್ಪು ತಯಾರಿಸುವುದರ ಮೂಲಕ ಕಾನೂನು ಭಂಗ ಮಾಡುವುದು ಮತ್ತು ಉಪ್ಪಿನ ಮಳಿಗೆಗಳನ್ನು ವಶಪಡಿಸಿಕೊಳ್ಳುವುದು ಉಪ್ಪಿನ ಸತ್ಯಾಗ್ರಹದ ಮುಖ್ಯ ಕಾರ್ಯಕ್ರಮಗಳಾಗಿದ್ದವು.

ಸಬರಮತಿ ಆಶ್ರಮದಿಂದ 1930 ಮಾರ್ಚ್ 12 ರಂದು ಅತ್ಯಂತ ಶಿಸ್ತಿನ ಮತ್ತು ಸುಶಿಕ್ಷಿತ 79 ಪಾದಚಾರಿಗಳೊಡನೆ ಗಾಂಧೀಜಿಯವರು ಗುಜರಾತಿನ ಸಮುದ್ರತೀರದ ಹಳ್ಳಿ ದಂಡಿಗೆ ತಮ್ಮ ಚರಿತ್ರಾರ್ಹ ದಂಡಿಯಾತ್ರೆ ಆರಂಭಿಸಿದರು. ಅನೇಕ ಗ್ರಾಮಗಳ ಮುಖಾಂತರ ಸುಮಾರು 200 ಮೈಲಿಗಳ ದೂರವನ್ನು 24 ದಿವಸಗಳಲ್ಲಿ ಪಾದಯಾತ್ರೆಯ ಮೂಲಕ ಗಾಂಧೀಜಿ ಮತ್ತು ಉಪ್ಪಿನ ಸತ್ಯಾಗ್ರಹಿಗಳು 1930 ಏಪ್ರಿಲ್ 5 ರಂದು ದಂಡಿಯನ್ನು ತಲುಪಿದರು. ದಾರಿಯುದ್ದಕ್ಕೂ ಜನರು ಹೆಚ್ಚು ಸಂತೋಷ, ಉತ್ಸಾಹಗಳಿಂದ ಈ ಚಳವಳಿಯಲ್ಲಿ ಭಾಗವಹಿಸಿದ್ದರು. ಗಾಂಧೀಜಿ ಸತ್ಯಾಗ್ರಹಿಗಳಿಗೆ, ಜನರಿಗೆ ಅವರಲ್ಲಿ ಹೊಸ ಶಕ್ತಿ ಚೈತನ್ಯ ಮೂಡುವಂತೆ ಮಾಡುತ್ತಿದ್ದರು. 1930ರ ಏಪ್ರಿಲ್ 6 ರಂದು ಗಾಂಧೀಜಿ ಮತ್ತು ಅವರ ಹಿಂಬಾಲಕರೆಲ್ಲರೂ ಬೆಳಗಿನ ಪ್ರಾರ್ಥನೆಯ ನಂತರ ಸಮುದ್ರ ತೀರದಲ್ಲಿದ್ದ ಉಪ್ಪನ್ನು ತೆಗೆದುಕೊಳ್ಳುವುದರ ಮೂಲಕ ಕಾನೂನು ಭಂಗಗೊಳಿಸಿದರು. ನಂತರ ಗಾಂಧೀಜಿಯವರು ಒಂದು ಹೇಳಿಕೆ ನೀಡಿ ಉಪ್ಪಿನ ಕಾನೂನು ಭಂಗಗೊಳಿಸಿ, ಮದ್ಯ, ಅಪೀಮು ಅಥವಾ ವಿದೇಶಿ ವಸ್ತುಗಳನ್ನು ಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದು, ವಿದೇಶಿವಸ್ತುಗಳನ್ನು ಸುಡುವುದು, ಸರ್ಕಾರಿ ಶಾಲಾ ಕಾಲೇಜು, ಹುದ್ದೆಗಳನ್ನು ಬಹಿಷ್ಕರಿಸುವುದು, ಸರ್ಕಾರಕ್ಕೆ ತೆರಿಗೆ ನಿರಾಕರಿಸುವುದು ಮುಂತಾದವುಗಳ ಮೂಲಕ ಅಹಿಂಸಾತ್ಮಕ ಸತ್ಯಾಗ್ರಹ ಕಾರ್ಯಕ್ರಮವನ್ನು ಯಶಸ್ಸುಗೊಳಿಸುವಂತೆ ಜನರಿಗೆ ಕರೆ ನೀಡಿದರು.



ಗಾಂಧೀಜಿಯವರ ಕರೆ ಪ್ರಬಲವಾದ ಜನತಾ ಚಳವಳಿಗೆ ನಾಂದಿಯಾಯಿತು. ದೇಶಾದ್ಯಂತ ಭಾರೀ ಮುಷ್ಕರಗಳು, ಸಾರ್ವಜನಿಕ ಸಭೆಗಳು ನಡೆದವು. ನೂರಾರು ಸರ್ಕಾರಿ ನೌಕರರು ತಮ್ಮ ಹುದ್ದೆಗಳನ್ನು ತೊರೆದರು. ಸಹಸ್ರಾರು ವಿದ್ಯಾರ್ಥಿಗಳು ಮತ್ತು ಮಹಿಳೆಯರು ಈ ಚಳವಳಿಯಲ್ಲಿ ಉತ್ಸಾಹದಿಂದ ಭಾಗವಹಿಸಿದರು. ಹಿಂಸಾತ್ಮಕ ಘಟನೆಗಳು ಅಧಿಕ ಪ್ರಮಾಣದಲ್ಲಿ ನಡೆದು ಕೆಲವು ಕಡೆಗಳಲ್ಲಿ ಜನರು ಪ್ರತಿ ಸರ್ಕಾರಗಳನ್ನು ಸ್ಥಾಪಿಸಿದರು. ಉಪ್ಪಿನ ಸತ್ಯಾಗ್ರಹ ದೇಶದ ಎಲ್ಲ ಕಡೆ ಹಬ್ಬಿ ಕ್ರಾಂತಿಯ ವಾತಾವರಣ ಉಂಟಾಯಿತು. ಎಂದಿನಂತೆ ಸರ್ಕಾರದ ಅಧಿಕಾರಿಗಳು ದಮನಕಾರಿ ನೀತಿ ಅನುಸರಿಸಿದರು. ಲಾಠಿ ಪ್ರಹಾರ ಗೋಲಿಬಾರ್ ಮತ್ತು ಬಂಧನಗಳು ಸರ್ವೇಸಾಮಾನ್ಯವಾದವು. ಅಸಂಖ್ಯಾತ ಜನರನ್ನು ಸೆರೆಮನೆಗೆ ದೂಡಲಾಯಿತು. ನೂರಾರು ಸತ್ಯಾಗ್ರಹಿಗಳು ಪೋಲೀಸರ ಗುಂಡಿಗೆ ಬಲಿಯಾದರು. 1930 ರ ಏಪ್ರಿಲ್‌ನಲ್ಲಿ ಜವಹರಲಾಲ್ ಅವರನ್ನು, 1930 ರ ಮೇ ತಿಂಗಳಲ್ಲಿ ಗಾಂಧೀಜಿಯವರನ್ನು ಬಂಧಿಸಲಾಯಿತು. ಗಾಂಧೀಜಿಯವರ ಬಂಧನದ ನಂತರ ಕಾಂಗ್ರೆಸ್ ಉಪ್ಪಿನ ಸತ್ಯಾಗ್ರಹವನ್ನು ಮತ್ತಷ್ಟು ವಿಸ್ತಾರ ಗೊಳಿಸಿತು. ಬಹಿಷ್ಕಾರಗಳು, ಮುಷ್ಕರಗಳು ಮತ್ತಷ್ಟು ಹೆಚ್ಚಾದವು. ಬ್ರಿಟೀಷರ ದಮನಕಾರಿ ನೀತಿ, ಅಮಾನುಷ ಕೃತ್ಯಗಳನ್ನು ಜನರು ಧೈರ್ಯ ಸ್ಥೈರ್ಯಗಳಿಂದ ಸಹಿಸಿದರು.

ದೇಶದ ಬಹುತೇಕ ಮುಸ್ಲಿಮರು ಗಾಂಧೀಜಿಯವರ ಅಹಿಂಸಾತ್ಮಕ ಕಾನೂನುಭಂಗ ಚಳವಳಿಯಲ್ಲಿ ಭಾಗವಹಿಸಲಿಲ್ಲ. ಭಾರತೀಯ ಮುಸ್ಲಿಮರು ಹಿಂದೂಗಳನ್ನು ಅವಲಂಬಿಸುವಂತೆ ಮಾಡುವುದೇ ಈ ಚಳವಳಿಯ ಉದ್ದೇಶವೆಂದು ಜಿನ್ನಾ ಭಾವಿಸಿದರು. ಕಾಂಗ್ರೆಸ್ ಮುಸ್ಲಿಮ್ ಲೀಗುಗಳ ಅಂತರ ದಿನೇ ದಿನೇ ಬೆಳೆಯುತ್ತಿದ್ದು, ದೇಶದ ವಿಭಜನೆಯನ್ನು ತ್ವರಿತಗೊಳಿಸಿತು.

**ದುಂಡು ಮೇಜಿನ ಸಭೆಗಳು:**

ಕಾನೂನು ಭಂಗ ಚಳವಳಿ ಆರಂಭವಾದ ಮೇಲೆ ಸ್ವಾತಂತ್ರ್ಯ ಹೋರಾಟದ ತೀವ್ರತೆ ವೈಸ್ ರಾಯ್ ಲಾರ್ಡ್‌ಇರ್ವಿನ್ನನ ಸರ್ಕಾರಕ್ಕೆ ಹೆಚ್ಚು ಆತಂಕ ಉಂಟಾಯಿತು. ಭಾರತೀಯರ ದೇಶಪ್ರೇಮ ಭಾವನೆಗಳು ಚಳವಳಿಗಳನ್ನು ಕೇವಲ ಸೈನ್ಯ ಹಾಗೂ ಪೋಲಿಸ್ ಬಲಪ್ರಯೋಗದಿಂದ ಹತ್ತಿಕ್ಕುವುದು ಅಸಾಧ್ಯವೆಂದು ಲಾರ್ಡ್ ಇರ್ವಿನ್ ಅರಿತನು. ಸಂಧಾನದ ಮೂಲಕ ಭಾರತದ ರಾಜಕೀಯ ಸಮಸ್ಯೆಗೆ ಪರಿಹಾರ ಹುಡುಕಿ ಜನರನ್ನು ಗೆಲ್ಲಲು ಇರ್ವಿನ್ ಪ್ರಯತ್ನ ನಡೆಸಿದ. ಆದ್ದರಿಂದ ಕಾಂಗ್ರೆಸ್ ಹಾಗೂ ಬ್ರಿಟಿಷ್ ಸರ್ಕಾರಕ್ಕೆ ಸೌಹಾರ್ದ ಸಹಕಾರದ ಸಂಬಂಧ ಮೂಡುವಂತೆ ಮಾಡುವುದು. ಇರ್ವಿನ್ನನ ಉದ್ದೇಶವಾಗಿತ್ತು ಭಾರತಕ್ಕೆ ಒಂದು ಹೊಸ ಸಂವಿಧಾನ ರಚಿಸಲು ಸಹಾಯಕವಾಗುವಂತಹ ವಿಷಯ ಕುರಿತು ಚರ್ಚಿಸಲು ಲಂಡನ್ನಿನಲ್ಲಿ ಒಂದು ದುಂಡು ಮೇಜಿನ ಸಭೆ ನಡೆಸುವುದಾಗಿ ಲಾರ್ಡ ಇರ್ವಿನ್ 1930 ರ ಮೇ ತಿಂಗಳಲ್ಲಿ ಪ್ರಕಟಿಸಿದ. ದುಂಡು ಮೇಜಿನ ಸಭೆಯನ್ನು 1930 ನವೆಂಬರ್‌ನಲ್ಲಿ ನಡೆಸಲಾಗುವುದೆಂದು ತಿಳಿಸಿದರು. ಆದರೆ ಸೆರೆಮನೆಯಲ್ಲಿದ್ದ ಕಾಂಗ್ರೆಸ್ ನಾಯಕರು ಭಾರತಕ್ಕೆ ಸಂಪೂರ್ಣ ಜವಾಬ್ದಾರಿ ಸರ್ಕಾರ ಮತ್ತು ಬ್ರಿಟಿಷ್ ಕಾಮನ್‌ವೆಲ್ತ್‌ನಿಂದ ತನಗೆ ಇಷ್ಟಬಂದಾಗ ಹೊರಗೆ ಬರುವ ಹಕ್ಕನ್ನು ನೀಡುವವರೆಗೂ ತಾವು ದುಂಡು ಮೇಜಿನ ಸಭೆಯಲ್ಲಿ ಭಾಗವಹಿಸುವುದಿಲ್ಲವೆಂದು ಹೇಳಿದರು.



**ಮೊದಲ ದುಂಡುಮೇಜಿನ ಸಭೆ:**

ಕಾಂಗ್ರೆಸ್ ನಾಯಕರು ದುಂಡು ಮೇಜಿನ ಸಭೆ ಯನ್ನು ಬಹಿಷ್ಕರಿಸಿದರು ಬ್ರಿಟಿಷ್ ಸರ್ಕಾರಕ್ಕೂ ಸಭೆ ನಡೆಸಲು ಏರ್ಪಾಡು ಮಾಡಿತು. ಮೊಟ್ಟಮೊದಲ ದುಂಡು ಮೇಜಿನ ಸಭೆ 1930ರ ನವೆಂಬರ್ 12 ರಿಂದ 1931ರ ಜನವರಿಯವರೆಗೆ ಲಂಡನ್ನಿನ ಜೇಮ್ಸ್ ಅರಮನೆಯಲ್ಲಿ ಸಮಾವೇಶಗೊಂಡಿತು. ಬ್ರಿಟಿಷ್ ರಾಜಕೀಯ ಪಕ್ಷಗಳು ಭಾತಥೀಯ ಲಿಬರಲ್ ಫೆಡರೇಶನ್ಸ್, ಮುಸ್ಲಿಂ ಲೀಗು, ಹಿಂದೂ ಮಹಾ ಸಭೆ, ಪರಿಶಿಷ್ಠ ವರ್ಗಗಳು ಮತ್ತು ಭಾರತೀಯ ದೇಶೀಯ ಸಂಸ್ಥಾನಗಳ 80 ಕ್ಕೂ ಹೆಚ್ಚಿನ ಪ್ರತಿನಿಧಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. ಕಾಂಗ್ರೆಸ್ ಮೊದಲ ದುಂಡುಮೇಜಿನ ಸಭೆಯನ್ನು ಬಹಿಷ್ಕರಿಸಿದ್ದರಿಂದ ಭಾರತಕ್ಕೆ ಹೊಸ ರಾಜ್ಯಾಂಗ ರಚಿಸುವ ಬಗ್ಗೆ ಚರ್ಚಿಸುವುದು ಸಾಧುವಲ್ಲವೆಂದು ಬ್ರಿಷಿಷ್ ಸರ್ಕಾರ ಅಭಿಪ್ರಾಯ ಪಟ್ಟಿತು ಮತ್ತು ಎರಡನೇ ದುಂಡು ಮೇಜಿನ ಸಭೆ ನಡೆಸಲು ತೀರ್ಮಾನಿಸಲಾಯಿತು. ಈ ಮಧ್ಯೆ ಕಾಂಗ್ರೆಸ್ ಮತ್ತು ಬ್ರಿಟಿಷ್ ಸರ್ಕಾರಗಳಿಗೆ ಸಾಮರಸ್ಯ ಉಂಟುಮಾಡಲು ಮತ್ತು ಮುಂದಿನ ದುಂಡು ಮೇಜಿನ ಸಭೆಯಲ್ಲಿ ಕಾಂಗ್ರೆಸ್ ಭಾಗವಹಿಸುವಂತೆ ಮಾಡಲು ಕಾಂಗ್ರೆಸ್ ನಾಯಕರ ಮನವೊಲಿಸುವ ಪ್ರಯತ್ನ ಮುಂದುವರೆಯಿತು.

**ಗಾಂಧಿ-ಇರ್ವಿನ್ ಒಪ್ಪಂದ 1931 ಮಾರ್ಚ್-5**

ಕಾಂಗ್ರೆಸ್ಸಿನ ಸಮ್ಮತಿ ಇಲ್ಲದೆ, ಭಾರತದಲ್ಲಿ ರಾಜ್ಯಾಂಗ ಸುಧಾರಣೆಗಳನ್ನು ಜಾರಿಗೊಳಿಸುವ ಯಾವ ಯೋಜನೆಯೂ ಸಫಲವಾಗುವುದಿಲ್ಲವೆಂದು ತಿಳಿದ ಬ್ರಿಟೀಷ್ ಸರ್ಕಾರ ಗಾಂಧೀಜಿ ಮತ್ತು ಕಾಂಗ್ರೆಸ್ಸಿನ ಇತರ ನಾಯಕರ ಸಹಕಾರ ಬಯಸಿತು. ಭಾರತದ ಅನೇಕ ಭಾಗಗಳಲ್ಲಿ ಒಂದಲ್ಲ ಒಂದು ವಿಧಾನದಲ್ಲಿ ನಡೆಯುತ್ತಿದ್ದ ಕಾನೂನು ಭಂಗ ಚಳವಳಿಯ ಬಗ್ಗೆ ವೈಸ್‌ರಾಯ್ ಲಾರ್ಡ್ ಇರ್ವಿನ್ ಆತಂಕಗೊಂಡಿದ್ದ. ಪರಿಸ್ಥಿತಿಯನ್ನು ತಿಳಿಗೊಳಿಸಲು ಇದ್ದ ಒಂದೇ ಒಂದು ಮಾರ್ಗವೆಂದರೆ, ಕಾಂಗ್ರೆಸ್ಸಿನ ಸಹಕಾರ ಮತ್ತು ವಿಶ್ವಾಸ ಗಳಿಸುವುದಾಗಿತ್ತು. ಆದ್ದರಿಂದ ಸರ್ಕಾರ, ಸಂಧಾನಕ್ಕೆ ಅನುಕೂಲವಾಗುವಂತೆ ಸ್ನೇಹಪೂರ್ಣ ವಾತಾವರಣ ಉಂಟುಮಾಡಲು, ಗಾಂಧೀಜೀಯವರು ಸೇರಿದಂತೆ ಕಾಂಗ್ರೆಸ್ಸಿನ ಎಲ್ಲ ನಾಯಕರನ್ನು ಬೇಷರತ್ತಾಗಿ 1931ರ ಫೆಬ್ರವರಿಯಲ್ಲಿ ಬಿಡುಗಡೆ ಮಾಡಿತು. ನಂತರ ತೇಜ್ ಬಹದ್ದೂರ್ ಸಪ್ರು, .ಎಂ.ಆರ್ ಜಯಕರ್ ಮತ್ತು ವಿ.ಎಸ್. ಶಾಸ್ತ್ರಿ ಅವರುಗಳು ಸರ್ಕಾರದೊಡನೆ ಮೈತ್ರಿ ಬೆಳೆಸುವ ಸಾಧ್ಯತೆಗಳ ಬಗ್ಗೆ ಚರ್ಚಿಸುವಂತೆ ಗಾಂಧೀಜಿಯವರನ್ನು ಕೇಳಿಕೊಂಡರು. ಈ ಹಿನ್ನೆಲೆಯಲ್ಲಿ ಗಾಂಧೀಜಿ ಮತ್ತು ಇರ್ವಿನ್ ಅವರುಗಳ ನಡುವೆ ಸಮಾರು 15 ದಿವಸಗಳ ಕಾಲ ಸಮಾಲೋಚನೆ ನಡೆದು 1931 ರ ಮಾರ್ಚ್ 5 ರಂದು ಒಂದು ಒಪ್ಪಂದವಾಯಿತು. ಈ ಒಪ್ಪಂದ ಗಾಂಧಿ-ಇರ್ವಿನ್ ಒಪ್ಪಂದವೆಂದು ಖ್ಯಾತಿ ಪಡೆಯಿತು.

ಗಾಂಧಿ-ಇರ್ವಿನ್ ಒಪ್ಪಂದದ ಪ್ರಮುಖ ಅಂಶಗಳೆಂದರೆ; ಕಾನೂನು ಭಂಗ ಚಳವಳಿಯನ್ನು ರದ್ದುಗೊಳಿಸಲು, ಈ ಚಳವಳಿಯ ಅವಧಿಯಲ್ಲಿ ನಡೆದ ಪೋಲೀಸ್ ದೌರ್ಜನ್ಯದ ಬಗ್ಗೆ ವಿಚಾರಣೆ ನಡೆಸಲು, ಒತ್ತಾಯಿಸದಿರಲು ಎಲ್ಲ ರೀತಿಯ ಬಹಿಷ್ಕಾರ ಕಾರ್ಯಕ್ರಮ ನಿಲ್ಲಿಸಲು ಭಾರತಕ್ಕೆ ಹೊಸ



ಸಂವಿಧಾನ ರಚಿಸುವ ಸಾಧ್ಯತೆಯ ಬಗ್ಗೆ ಚರ್ಚಿಸಲು, ಎರಡನೇ ದುಂಡು ಮೇಜಿನ ಸಭೆಯಲ್ಲಿ ಭಾಗವಹಿಸಲು ಕಾಂಗ್ರೆಸ್ಸಿನ ಪರವಾಗಿ ಗಾಂಧೀಜಿ ಒಪ್ಪಿದರು. ಅದೇ ರೀತಿ ಕಾನೂನು ಭಂಗ ಚಳವಳಿಯನ್ನು ಹತ್ತಿಕ್ಕಲು ಹೊರಡಿಸಿದ ಎಲ್ಲ ವಿಶೇಷ ಆಜ್ಞೆಗಳನ್ನು ಹಿಂತೆಗೆದುಕೊಳ್ಳಲು ಮತ್ತು ರಾಜಕೀಯ ಕಾರ್ಯಕರ್ತರ ವಿರುದ್ಧದ ಎಲ್ಲ ಮೊಕದ್ದಮೆಗಳನ್ನು ಕೈಬಿಡಲು, ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗಿದವರನ್ನು ಬಿಟ್ಟು ಮಿಕ್ಕ ಎಲ್ಲ ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಲು ಕಾನೂನು ಭಂಗ ಚಳವಳಿಯ ಕಾಲದಲ್ಲಿ ವಶಪಡಿಸಿಕೊಂಡಿದ್ದ ಆಸ್ತಿಗಳನ್ನು ಸಂಬಂಧಿಸಿದವರಿಗೆ ಹಿಂದಿರುಗಿಸಲು, ಸಮುದ್ರ ತೀರದಿಂದ ನಿರ್ದಿಷ್ಠ ದೂರದ ಒಳಗೆ ವಾಸಿಸುವ ಜನರಿಗೆ ಉಪ್ಪಿನ ತೆರಿಗೆ ವಿಧಿಸದಿರಲು, ಉಪ್ಪನ್ನು ಸಂಗ್ರಹಿಸಲು ಹಾಗೂ ಉತ್ಪಾದಿಸಲು ಅನುಮತಿ ನೀಡಲು, ಮಧ್ಯ, ಅಫೀಮು ಅಂಗಡಿಗಳ ಬಳಿ ಶಾಂತಿಯುತ ಮುಷ್ಕರ ನಡೆಸಲು, ಅನುಮತಿ ನೀಡಲು ಬ್ರಿಟೀಷ್ ಸರ್ಕಾರ ತನ್ನ ಒಪ್ಪಿಗೆ ನೀಡಿತು.

**ಎರಡನೆ ದುಂಡು ಮೇಜಿನ ಸಭೆ:**

ಈ ಹಂತದಲ್ಲಿ ಬ್ರಿಟಿಷ್ ಸರ್ಕಾರದೊಡನೆ ಉತ್ತಮ ಬಾಂಧವ್ಯ ಹೊಂದುವುದು ಗಾಂಧೀಜಿಯವರ ಆಶಯವಾಗಿತ್ತು. ಹಿಂದೂ ಮುಸ್ಲಿಮ್ ಐಕ್ಯತೆಯ ಬಗ್ಗೆಯೂ ಗಾಂಧೀಜಿಯವರು ತಮ್ಮ ಆಸಕ್ತಿ ವ್ಯಕ್ತಪಡಿಸಿದರು. ಆಗಿಂದಾಗ್ಗೆ ಮುಸ್ಲಿಮರ ಸಮಸ್ಯೆಗಳ ಬಗ್ಗೆ ಚರ್ಚಿಸಿ ಅವರಿಗೆ ಸಾಂತ್ವನ ಹೇಳುತ್ತಿದ್ದರು ಗಾಂಧಿ-ಇರ್ವಿನ್ ಒಪ್ಪಂದ ವಾದಕೂಡಲೆ 1931 ರ ಏಪ್ರಿಲ್‌ನಲ್ಲಿ ಮುಸ್ಲಿಮ್ ನಾಯಕರನ್ನು ಬೇಟಿ ಮಾಡಿ ಚರ್ಚಿನಡೆಸಿದರು ಆದರೆ ಪ್ರತಿಗಾಮಿ ಮುಸ್ಲಿಮ್ ನಾಯಕರು ಜಿನ್ನಾರವರ 14 ಅಂಶಗಳನ್ನು ಕಾಂಗ್ರೆಸ್ ಒಪ್ಪಿಕೊಳ್ಳಬೇಕೆಂದು ಒತ್ತಾಯಿಸಿದರು. ಮುಸ್ಲಿಮರಿಗೆ ಒಂದು ಪ್ರತ್ಯೇಕ ರಾಜ್ಯ ನೀಡಬೇಕೆಂಬುದು ಜಿನ್ನಾ ಅವರ ವಾದವಾಗಿತ್ತು. ಗಾಂಧೀಜಿಯವರಿಗೆ ಮುಸ್ಲಿಮರ ಈ ಬೇಡಿಕೆಗಳು ಸರಿ ಬೀಳಲಿಲ್ಲ. ಲಂಡನ್ನಿನಲ್ಲಿ ನಡೆಯುವ ಚರ್ಚೆಯಲ್ಲಿ ಹಿಂದೂ-ಮುಸ್ಲಿಮ್ ಸಮಸ್ಯೆಗೆ ಪರಿಹಾರ ಹುಡುಕಬಹುದೆಂಬ ಆಶಾಭಾವನೆ ಹೊತ್ತು, 1931 ರ ಆಗಸ್ಟ್ 29 ರಂದು ಗಾಂಧೀಜಿಯವರು ಲಂಡನ್ನಿಗೆ ಪ್ರಯಾಣ ಮಾಡಿದರು.

1931 ಸೆಪ್ಟೆಂಬರ್‌ನಲ್ಲಿ ಎರಡನೇ ದುಂಡು ಮೇಜಿನ ಸಭೆ ಲಂಡನ್ನಿನಲ್ಲಿ ನಡೆಯಿತು. ಬ್ರಿಟನ್ನಿನ ಮೂರು ಪ್ರಮುಖ ರಾಜಕೀಯ ಪಕ್ಷಗಳ, ಬ್ರಿಟಿಷ್ ಭಾರತದ ರಾಜಕೀಯ ಪಕ್ಷಗಳ ಮತ್ತು ದೇಶೀಯ ಸಂಸ್ಥಾನಗಳ 107 ಪ್ರಮುಖ ಪ್ರತಿನಿಧಿಗಳು ಎರಡನೇ ದುಂಡು ಮೇಜಿನ ಸಭೆಯಲ್ಲಿ ಭಾಗವಹಿಸಿದ್ದರು. ಈ ಸಭೆಯಲ್ಲಿ ಎರಡು ಪ್ರಮುಖ ವಿಷಯಗಳ ಬಗ್ಗೆ ಚರ್ಚೆಗಳು ನಡೆದವು. ಭಾರತದ ಮುಂದಿನ ರಾಜ್ಯಾಂಗ ರಚನೆ ಮತ್ತು ಅಲ್ಪಸಂಖ್ಯಾತರ ಸಮಸ್ಯೆಗಳ ಬಗ್ಗೆ ಚರ್ಚಿಸಲಾಯಿತು. ಬ್ರಿಟಿಷ್ ಭಾರತ ಮತ್ತು ದೇಶೀಯ ಸಂಸ್ಥಾನಗಳನ್ನೊಳಗೊಂಡ ಐಕ್ಯ ಭಾರತದ ಫೆಡರೇಷನ್ನಿನ ಭಾವನೆ ಹಿಂದೂಗಳಿಗೆ ಸಮ್ಮತವಾಗಿತ್ತು. ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಸಂಪೂರ್ಣ ಸ್ವರಾಜ್ಯದ ಬಗ್ಗೆ ನಿರ್ಣಯ ಕೈಗೊಂಡಿದಾಗ್ಯೂ, ಸದ್ಯಕ್ಕೆ ಡೋಮಿನಿಯನ್ ಅಂತಸ್ತು ನೀಡಿದರೂ, ಅದು ಮುಂದೆ ಭಾರತದ



ಸ್ವಾತಂತ್ರ್ಯಕ್ಕೆ ಸಹಾಯಕವಾಗುವುದಾದರೆ ತಮಗೆ ತೃಪ್ತಿ ಎಂಬ ಸೂಚನೆ ಗಾಂಧೀಜಿಯವರು ನೀಡಿದರು. ಆದರೆ ಮುಸ್ಲಿಮ್ ಲೀಗ್ ಗಾಂಧೀಜಿಯವರ ಅಭಿಪ್ರಾಯಗಳನ್ನು ವಿರೋಧಿಸಿ ಭಾರತೀಯ ಮುಸ್ಲಿಮರಿಗೆ ಪ್ರತ್ಯೇಕ ರಾಷ್ಟ್ರವಾಗಬೇಕೆಂದು ಒತ್ತಾಯಸಿತು. ದೇಶೀಯ ರಾಜರುಗಳು ಐಕ್ಯಭಾರತ ಫೆಡರೇಷನ್ ಸ್ಥಾಪನೆಯಾಗಿ ಬ್ರಿಟೀಷರು ಭಾರತದಿಂದ ಕಾಲ್ತೆಗೆದರೆ ತಮ್ಮ ತಮ್ಮ ರಾಜ್ಯಗಳಿಗೆ, ರಾಜಪದವಿ ಹಾಗೂ ಅಧಿಕಾರಕ್ಕೆ ಸಂಚಕಾರ ಉಂಟಾಗಬಹುದೆಂಬ ಆತಂಕ ವ್ಯಕ್ತಪಡಿಸಿದರು. ಹೀಗಾಗಿ ಭಾರತಕ್ಕೆ ಹೊಸ ರಾಜ್ಯಾಂಗ ರಚನೆಯ ಬಗ್ಗೆ ಯಾವ ತೀರ್ಮಾನಕ್ಕೆ ಬರುವುದು ಸಾಧ್ಯವಾಗಲಿಲ್ಲ. ಪರಿಶಿಷ್ಟ ವರ್ಗದವರ ಪ್ರತಿನಿಧಿಯಾಗಿದ್ದ ಡಾ|| ಅಂಬೇಡ್ಕರ್ ಅವರು ಪರಿಶಿಷ್ಟ ವರ್ಗದವರಿಗೆ ಶಾಸನಸಭೆಗಳಲ್ಲಿ ಪ್ರತ್ಯೇಕ ಚುನಾವಣಾ ಕ್ಷೇತ್ರಗಳು ಮತ್ತು ಅವರ ಹಿತಾಸಕ್ತಿಗಳ ಬಗ್ಗೆ ತಮ್ಮ ಒಲವು ವ್ಯಕ್ತಪಡಿಸಿದರು. ಆದರೆ ಹಿಂದೂ-ಮುಸ್ಲಿಮರು ಐಕ್ಯಭಾರತದಲ್ಲಿ ಒಟ್ಟಿಗೆ ಒಂದಾಗಿ ಬದುಕಬೇಕೆಂದು ಗಾಂಧೀಜಿಯವರ ಆಶಯವಾಗಿತ್ತು. ಪರಿಶಿಷ್ಟ ವರ್ಗದವರು ಅಥವಾ ಹರಿಜನರು ಹಿಂದೂಗಳೇ ಆಗಿರುವುದರಿಂದ ಅವರನ್ನು ಪ್ರತ್ಯೇಕವರ್ಗವೆಂದು ವರ್ಗೀಕರಿಸಬಾರದೆಂದು ಗಾಂಧೀಜಿಯವರು ವಾದಿಸಿದರು. ಮತೀಯ ಸಮಸ್ಯೆಗಳು ಚರ್ಚೆಗೆ ಬಂದಾಗಲೆಲ್ಲ ಬಿರುಸಿನ ಚರ್ಚೆಗಳಾಗುತ್ತಿದ್ದು, ಎಲ್ಲ ಪ್ರತಿನಿಧಿಗಳು ತಮ್ಮ ತಮ್ಮ ನಿಲುವಿಗೆ ಕಟ್ಟು ಬಿದ್ದು ಯಾರೂ ರಾಜಿಗೆ ಸಿದ್ಧರಿರಲಿಲ್ಲ. ಇದು ಬ್ರಿಟನ್ನಿನವರಿಗೆ ಹೆಚ್ಚು ಅನುಕೂಲವಾಯಿತು ಮತ್ತು ಅವರು ಭಾರತದಲ್ಲಿ ತಮ್ಮ ಆಳ್ವಿಕೆ ಮುಂದುವರೆಸಲು ಸಾಧ್ಯವಾಯಿತು. ಎರಡನೆಯ ದುಂಡು ಮೇಜಿನ ಸಮ್ಮೇಳನವೂ ಭಾರತದ ದೃಷ್ಟಿಯಿಂದ ವಿಫಲವಾಯಿತು. ಗಾಂಧೀಜಿಯವರು ತುಂಬಾ ವ್ಯಾಕುಲತೆಯಿಂದ ಭಾರತಕ್ಕೆ ಬರಿಗೈಯ್ಯಲ್ಲಿ ಹಿಂದಿರುಗಿದರು.

**ರಾಮ್ಸೆ ಮ್ಯಾಕ್ಡೋನಾಲ್ಡರ ಮತೀಯ ತೀರ್ಪು:** ಎರಡನೇ ದುಂಡು ಮೇಜಿನ ಸಭೆಯಲ್ಲಿ ವಿವಿಧ ಪಕ್ಷಗಳು ಸರ್ವಸಮ್ಮತ ಒಪ್ಪಂದಕ್ಕೆ ಬರದಿದ್ದುದರಿಂದ ಬ್ರಿಟನ್ನಿನ ಪ್ರಧಾನಿ ರಾಮ್ಸೆ ಮ್ಯಾಕ್‌ಡೋನಾಲ್ಡರು ಬ್ರಿಟಿಷ್ ಸರ್ಕಾರವೇ ತನ್ನ ತೀರ್ಪು ನೀಡಬೇಕಾಗಿದೆಯೆಂದು ಹೇಳಿದರು. ಅದೇ ರೀತಿ 1932 ರ ಆಗಸ್ಟ್ 16 ರಂದು ತಮ್ಮ ಕುಪ್ರಸಿದ್ಧ ಮತ ಆಧಾರಿತ ಮತೀಯ ತೀರ್ಪನ್ನು ಪ್ರಕಟಿಸಿದರು. ಮತ ಆಧಾರಿತ ಮತೀಯ ತೀರ್ಪಿನ ಪ್ರಕಾರ ಮುಸ್ಲಿಮರು, ಸಿಖ್ಖರು, ಯುರೋಪಿಯನ್ನರು, ಆಂಗ್ಲೋ-ಭಾರತೀಯರು, ಭಾರತೀಯ ಕ್ರೈಸ್ತರು ಹಾಗೂ ಪರಿಶಿಷ್ಟ ವರ್ಗದವರಿಗೆ ನಿರ್ದಿಷ್ಟ ಸಂಖ್ಯೆಯ ಸದಸ್ಯತ್ವ ನಿಗದಿಗೊಳಿಸಿ, ಇವರೆಲ್ಲರಿಗೂ ಪ್ರತ್ಯೇಕ ಮತ ಕ್ಷೇತ್ರಗಳನ್ನು ಗೊತ್ತು ಪಡಿಸುವ ನಿರ್ಧಾರಕ್ಕೆ ಬ್ರಿಟಿಷ್ ಸರ್ಕಾರ ಬಂದಿತು ರಾಮ್ಸೆ ಮ್ಯಾಕ್ಡೊನಾಲ್ಡರ ಮತೀಯ ತೀರ್ಪು ಬ್ರಿಟೀಷರು ಭಾರತದಲ್ಲಿ ಅನುಸರಿಸುತ್ತಿದ್ದ ವಿಭಜಿಸು ಆಳು ಎಂಬ ನೀತಿಗೆ ಮತ್ತೊಂದು ಪ್ರಮುಖ ನಿದರ್ಶನವಾಗಿತ್ತು. ಪರಿಶಿಷ್ಟವರ್ಗ ಅಥವಾ ಹರಿಜನರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರ ಏರ್ಪಡಿಸುವುದಾದರೆ ತಾವು ಆಮರಣಾಂತ ಉಪವಾಸ ಸತ್ಯಾಗ್ರಹ ಮಾಡುವುದಾಗಿ ಮಹಾತ್ಮ ಗಾಂಧೀಜಿಯವರು 1932 ರ ಮಾರ್ಚ್ ತಿಂಗಳಲ್ಲಿಯೇ ಸರ್ಕಾರಕ್ಕೆ ತಿಳಿಸಿದ್ದರು. ಮತೀಯ ತೀರ್ಪು ಮುಸ್ಲಿಮ್ ಲೀಗ್ ಮತ್ತು ಅಲ್ಪಸಂಖ್ಯಾತರಿಗೆ ಸಂತೊಷ ಉಂಟುಮಾಡಿದರೆ, ಕಾಂಗ್ರೆಸ್ ಮತ್ತು ದೇಶದ ಪ್ರಮುಖ



ರಾಷ್ಟ್ರೀಯವಾದಿಗಳೆಲ್ಲರೂ ತಮ್ಮ ಅಸಂತೋಷ ವ್ಯಕ್ತಪಡಿಸಿದರು. ಈ ತೀರ್ಪು ಪ್ರಜಾಪ್ರಭುತ್ವ ತತ್ವಕ್ಕೆ ವಿರುದ್ಧವಾಗಿದ್ದು, ಪರಿಶಿಷ್ಟ ವರ್ಗದವರನ್ನು ಹಿಂದೂಗಳಿಂದ ಬೇರ್ಪಡಿಸುವ ಕುತಂತ್ರವಾಗಿದ್ದು, ಭಾರತೀಯರನ್ನು ನಿರ್ವೀರ್ಯನ್ನಾಗಿ ಮಾಡುವುದು ಬ್ರಿಟೀಷರ ಪ್ರಯತ್ನವಾಗಿತ್ತು. ಬ್ರಿಟೀಷರ ಈ ರೀತಿಯ ಕುತಂತ್ರ ರಾಷ್ಟ್ರೀಯ ಏಕತೆಯ ಬುಡಕ್ಕೆ ಕೊಡಲಿ ಪೆಟ್ಟು ನೀಡುವಂತಾದ್ದಾಗಿತ್ತು.

**ಮೂರನೇ ದುಂಡುಮೇಜಿನ ಸಭೆ:**

ಮೂರನೇ ಹಾಗೂ ಕೊನೆಯ ದುಂಡು ಮೇಜಿನ ಸಭೆ 1932 ರ ನವೆಂಬರ್ 17 ರಿಂದ ಡಿಸೆಂಬರ್ 24 ರವರೆಗೆ ನಡೆಯಿತು. ಆ ವೇಳೆಗಾಗಲೇ ಗಾಂಧೀಜಿಯವರ ನೇತೃತ್ವದಲ್ಲಿ ಎರಡನೇ ಹಂತದ ಅಸಹಕಾರ ಕಾನೂನು ಭಂಗ ಚಳವಳಿಯನ್ನು ಪ್ರಾರಂಭಿಸಿದ್ದರಿಂದ ಕಾಂಗ್ರೆಸ್ ಮೂರನೇ ದುಂಡು ಮೇಜಿನ ಸಭೆಯನ್ನು ಬಹಿಷ್ಕರಿಸಿತು. ಮೂರನೇ ದುಂಡು ಮೇಜಿನ ಸಭೆಗೆ ಹಾಜರಾಗಿದ್ದ ಪ್ರತಿನಿಧಿಗಳು ಈ ಮೊದಲಿನ ದುಂಡು ಮೇಜಿನ ಸಭೆಗಳು ನೇಮಿಸಿದ ಹಲವಾರು ಸಮಿತಿಗಳ ವರದಿಗಳನ್ನು ಚರ್ಚಿಸಿದ್ದನ್ನು ಬಿಟ್ಟರೆ ಬೇರೇನನ್ನು ಸಾಧಿಸಲಿಲ್ಲ. ಮೂರನೇ ದುಂಡು ಮೇಜಿನ ಸಭೆಯೂ ಮೊದಲೆರಡ ಸಭೆಗಳಂತೆ ವಿಫಲವಾಯಿತು.

**ಎರಡನೇ ಹಂತದ ಕಾನೂನು ಭಂಗ ಚಳವಳಿ:** ಎರಡನೆ ದುಂಡು ಮೇಜಿನ ಸಭೆ ವಿಫಲವಾದ ನಂತರ, 1931 ರ ಡಿಸೆಂಬರ್ 28 ರಂದು ಗಾಂಧೀಜಿಯವರು ವ್ಯಾಕುಲಚಿತ್ತರಾಗಿ ಭಾರತಕ್ಕೆ ಹಿಂದಿರುಗಿದ್ದರು. ಭಾರತದಲ್ಲಿನ ಪರಿಸ್ಥಿತಿ ದಿನೇ ದಿನೇ ಕಳವಳಕಾರಿಯಾಗುತಿತ್ತು. ಇರ್ವಿನ್ನನ ನಂತರ ಭಾರತದ ವೈಸರಾಯ್ ಆಗಿದ್ದ ಲಾರ್ಡ್ ವೆಲ್ಲಿಂಗ್‌ಟನ್ ಕೂಡ ದಮನಕಾರಿ ನೀತಿ ಕ್ರಮಗಳಿಗೆ ಜೋತು ಬಿದ್ದಿದ್ದ. ಭಾರತೀಯ ರಾಷ್ಟ್ರೀಯವಾದಿಗಳ ಚೈತನ್ಯ ಉತ್ಸಾಹಗಳನ್ನು ಅಡಗಿಸಲು ಮೇಲಿಂದ ಮೇಲೆ ಕ್ರಮ ತೆಗೆದುಕೊಳ್ಳಲಾಯಿತು ಗಾಂಧೀಜಿಯವರು, ಸರ್ಕಾರದ ಅಮಾನುಷ ದಮನಕಾರಿ ಕ್ರಮಗಳ ಬಗ್ಗೆ ತಮ್ಮ ಆತಂಕ ವ್ಯಕ್ತಪಡಿಸಿ, ಹೊಸ ವೈಸ್‌ರಾಯ್ ಅವರನ್ನು ಭೇಟಿ ಮಾಡುವ ಇಚ್ಛೆ ವ್ಯಕ್ತಪಡಿಸಿದರು.

ಆದರೆ ಲಾರ್ಡ್‌ವೆಲ್ಲಿಂಗ್‌ಟನ್ ಗಾಂಧೀಜಿಯವರನ್ನು ಭೇಟಿ ಮಾಡಲು ನಿರಾಕರಿಸಿ, ಭಾರತೀಯರ ಹೋರಾಟವನ್ನು ಹತ್ತಿಕ್ಕಲು ವಿಶೇಷ ಆಜ್ಞೆಗಳನ್ನು ಹೊರಡಿಸಿದನು. ಇದರಿಂದಾಗಿ ಗಾಂಧೀಜಿಯವರು ಕಾನೂನು ಭಂಗ ಅಸಹಕಾರ ಚಳವಳಿಯನ್ನು ತೀವ್ರವಾಗಿ ಮತ್ತೆ ಆರಂಭಿಸಲು ನಿರ್ಧರಿಸಿದರು. ಕಾನೂನು ಭಂಗ ಚಳವಳಿ ಆರಂಭವಾಗುತ್ತಿದ್ದಂತೆಯೇ ಸರ್ಕಾರ ತನ್ನ ಎಂದಿನ ಅನಾಗರೀಕ ಧಮನಕಾರಿ ಕ್ರಮಗಳನ್ನು ಮುಂದುವರೆಸಿತು. ಸಹಸ್ರಾರು ಕಾಂಗ್ರೆಸ್ ಕಾರ್ಯಕರ್ತರನ್ನು ಬಂಧಿಸಿ ಸೆರೆಮನೆಗೆ ದೂಡಿತು. ಮಹಾತ್ಮ ಗಾಂಧೀಜಿ ಜವಹರಲಾಲ್ ನೆಹರು, ಸರ್ದಾರ್ ವಲ್ಲಭ ಭಾಯಿಪಟೇಲ್ ಮುಂತಾದವರು ಸೆರೆಮನೆಗೆ ತಳಲ್ಪಟ್ಟವರಲ್ಲಿ ಮೊದಲಿಗರಾಗಿದ್ದರು. ಕಾಂಗ್ರೆಸ್ ಕಛೇರಿಗಳನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ಲಾಠಿಚಾರ್ಜ್, ಗೋಲೀಬಾರ್‌ಗಳು ನಡೆಯುತ್ತಲೇ ಇದ್ದವು. ಚಳವಳಿಗಾರರ ಆಸ್ತಿಪಾಸ್ತಿಗಳನ್ನು ನಾಶಪಡಿಸಲಾಯಿತು, ಇಲ್ಲ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು.







06205

ಚಳವಳಿಗಾರರ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿ ಅಧಿಕ ದಂಡ ವಿಧಿಸಲಾಯಿತು.

ತೀವ್ರ ಬಗೆಯ ದಮನಕಾರಿ ಕ್ರಮಗಳನ್ನು ಸರ್ಕಾರ ಜಾರಿ ಗೊಳಿಸಿದಾಗ್ಯೂ ಅಸಹಕಾರ ಕಾನೂನು ಭಂಗ ಚಳವಳಿ ಅವ್ಯಾಹತವಾಗಿ ನಡೆಯಿತು. ಪ್ರತಿಭಟನಾ ಸಭೆಗಳು, ಪ್ರದರ್ಶನಗಳು ನಡೆದುವು. ವಿದೇಶಿ ಬಟ್ಟೆಗಳು ಮತ್ತು ಇತರ ವಸ್ತುಗ್ಳನ್ನು ಬಹಿಷ್ಕರಿಸಲಾಯಿತು. ಉಪ್ಪಿನ ಕಾನೂನು ಮುರಿದು ಉಪ್ಪನ್ನು ತಯಾರಿಸಲಾಯಿತು. ತೆರಿಗೆ ಮತ್ತು ಭೂಕಂದಾಯವನ್ನು ನಿರಾಕರಿಸಿ ಎಲ್ಲ ಕಡೆ ರಾಷ್ಟ್ರೀಯ ಧ್ವಜವನ್ನು ಹಾರಿಸಲಾಯಿತು. ಅನೇಕ ನಿರ್ಬಂಧಗಳಿದ್ದಾಗ್ಯೂ ದೆಹಲಿಯಲ್ಲಿ ಕಾಂಗ್ರೆಸ್ ವಾರ್ಷಿಕ ಸಭೆ ನಡೆಸಿ ಸಂಪೂರ್ಣ ಸ್ವಾತಂತ್ರ್ಯದ ನಿರ್ಣಯವನ್ನು ಮತ್ತೊಮ್ಮೆ ದೃಢೀಕರಿಸಲಾಯಿತು.

**ಪೂನಾ ಒಪ್ಪಂದ:** ಮತೀಯ ತೀರ್ಪನ್ನು ಹಿಂತೆಗೆದುಕೊಳ್ಳದಿದ್ದರೆ, ತಾವು ಆಮರಣಾಂತ ಉಪವಾಸ ಮಾಡುವುದಾಗಿ ಗಾಂಧೀಜಿಯವರು ಪ್ರಧಾನಿ ಮ್ಯಾಕ್‌ಡೋನಾಲ್ಡ್‌ರಿಗೆ ಪತ್ರ ಬರದಿದ್ದರು. ಬ್ರಿಟಿಷ್ ಪ್ರಧಾನಿಯಿಂದ ಇದರ ಬಗ್ಗೆ ಯಾವ ಸ್ಪಷ್ಟನೆ ಬರದಿದ್ದುದರಿಂದ, 1932 ರ ಸೆಪ್ಟೆಂಬರ್ 20 ರಂದು ಯರವಾಡ ಸೆರೆಮನೆಯಲ್ಲಿಯೇ ಗಾಂಧೀಜಿಯವರು ತಮ್ಮ ಉಪವಾಸ ಆರಂಭಿಸಿದರು. ಗಾಂಧೀಜಿಯವರು ಉಪವಾಸ ಸತ್ಯಾಗ್ರಹ ಕೂಡಲೇ ಕೈಬಿಡಬೇಕೆಂದು ಅನೇಕ ಮುಖಂಡರು ಒತ್ತಾಯಿಸಿದರು. ಆದರೆ ಗಾಂಧೀಜಿಯವರು ತಮ್ಮ ನಿರ್ಧಾರದಿಂದ ಹಿಂದೆ ಸರಿಯಲಿಲ್ಲ. ಗಾಂಧೀಜಿಯವರ ಪ್ರಾಣಕ್ಕೆ ಹಾನಿ ಉಂಟಾಗುವುದನ್ನು ತಪ್ಪಿಸಲು ಕಾಂಗ್ರೆಸ್ಸಿನ ಮುಖಂಡರುಗಳಾದ ಸಿ.ರಾಜಗೋಪಾಲಚಾರಿ, ಡಾ|| ರಾಜೇಂದ್ರಪ್ರಸಾದ್, ಸರ್ ತೇಜ್‌ಬಹದ್ದೂರ್ ಸಪ್ರು, ಮಾಳವೀಯ ಮುಂತಾದವರು ಪೂನಾದಲ್ಲಿ ಡಾ|| ಅಂಬೇಡ್ಕರ್ ಅವರೊಡನೆ ಚರ್ಚೆ ಆರಂಭಿದರು. ಡಾ|| ಅಂಬೇಡ್ಕರ್ ಅವರು ಗಾಂಧೀಜಿಯವರ ಉಪವಾಸ ಸತ್ಯಾಗ್ರಹ ಕೇವಲ ಪ್ರದರ್ಶನವೆಂದು ಪ್ರತಿಕ್ರಿಯಿಸಿದರು. ಕೊನೆಯಲ್ಲಿ ಅನೇಕ ಮುಖಂಡರ ಪ್ರಯತ್ನದ ಫಲವಾಗಿ 1932 ಸೆಪ್ಟಂಬರ್ 25 ರಂದು ಪ್ರಸಿದ್ದ ಪೂನಾ ಒಪ್ಪಂದವಾಯಿತು. ಈ ಒಪ್ಪಂದದ ಪ್ರಕಾರ ಪರಿಶಿಷ್ಟ ವರ್ಗದವರು ಪ್ರತ್ಯೇಕ ಮೀಸಲು ಚುನಾವಣ ಕ್ಷೇತ್ರಕ್ಕೆ ಬದಲಾಗಿ ಸಾಮಾನ್ಯ ಚುನಾವಣಾ ಕ್ಷೇತ್ರಗಳನ್ನು ಒಪ್ಪಿಕೊಂಡರು. ಪ್ರಾಂತೀಯ ಶಾಸನ ಸಭೆಗಳಲ್ಲಿ ಸಾಮಾನ್ಯ ಚುನಾವಣ ಕ್ಷೇತ್ರಗಳಲ್ಲಿ ಪರಿಶಿಷ್ಟ ವರ್ಗದವರಿಗೆ, ಮತೀಯ ತೀರ್ಪಿನಲ್ಲಿ ನಿಗಧಿಗೊಳಿಸಲಾಗಿದ್ದ ಒಟ್ಟು ಸ್ಥಾನಗಳ ಸಂಖ್ಯೆಯಲ್ಲಿ 148 ಸ್ಥಾನಗಳನ್ನು ಮೀಸಲಿಡಲಾಯಿತು. ಇದರ ಜೊತೆಗೆ ಕೇಂದ್ರೀಯ ಶಾಸನ ಸಭೆಗಳಲ್ಲಿ ಶೇಕಡ ಹದಿನೆಂಟರಷ್ಟನ್ನು ಸಾಮಾನ್ಯ ಸ್ಥಾನಗಳಲ್ಲಿ ಮೀಸಲಿಡಲು ಒಪ್ಪಿಕೊಳ್ಳಲಾಯಿತು. ಸ್ಥಳೀಯ ಸಂಸ್ಥೆಗಳು ಮತ್ತು ಸಾರ್ವಜನಿಕ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯ ನೀಡಲು ಸಹ ಒಪ್ಪಿಕೊಳ್ಳಲಾಯಿತು. ಪೂನಾ ಒಪ್ಪಂದದಿಂದಾಗಿ ಗಾಂಧೀಜಿಯವರು ತಮ್ಮ ಉಪವಾಸ ಕೈಬಿಟ್ಟರಲ್ಲದೆ, ಕಾಂಗ್ರೆಸ್ ಮತ್ತು ಪರಿಶಿಷ್ಟ ವರ್ಗಗಳಲ್ಲಿ ಐಕ್ಯತೆ ಉಂಟಾಗುವ ಸಾಧ್ಯತೆಗಳು ಹೆಚ್ಚಾದವು.

ಕಾನೂನು ಭಂಗ ಚಳವಳಿಯನ್ನು 1934 ರ ಮೇ ತಿಂಗಳಲ್ಲಿ ನಿಲ್ಲಿಸಲಾಯಿತು ಮತ್ತು ಸರ್ಕಾರ ಜಾರಿಗೆ ತಂದಿದ್ದ ಸುಧಾರಣೆಗಳನ್ನು ಕಾರ್ಯಗತಗೊಳಿಸಲು ಕಾಂಗ್ರೆಸ್ ನಿರ್ಧರಿಸಿತು. ಬ್ರಿಟಿಷ್ ಸರ್ಕಾರ ದಮನಕಾರಿ ಕ್ರಮಗಳನ್ನು ನಿಲ್ಲಿಸಿ ಎಲ್ಲ ರಾಜಕೀಯ ಬಂಧಿಗಳನ್ನು ಬಿಡುಗಡೆ ಮಾಡಿತು. ಇದರಿಂದಾಗಿ



1935 ರ ಭಾರತ ಸರ್ಕಾರದ ಕಾಯಿದೆಯ ಅಂಶಗಳನ್ನು ಜಾರಿಗೆ ತರಲು ಒಂದು ಸೌಹಾರ್ದಯುತ ವಾತಾವರಣ ಉಂಟಾಯಿತು.

**1935 ರ ಭಾರತ ಸರ್ಕಾರ ಕಾಯಿದೆ ಮತ್ತು ಕಾಂಗ್ರೆಸ್ ಪಕ್ಷ:**

ದುಂಡು ಮೇಜಿನ ಸಭೆಗಳಲ್ಲಿ ನಡೆದ ಚರ್ಚೆಗಳನುಸಾರವಾಗಿ ಭಾರತದ ರಾಜ್ಯಾಂಗ ಸುಧಾರಣೆಗಳಿಗೆ ಕೆಲವು ಸಲಹೆಗಳನ್ನು ಸೂಚಿಸಲಾಯಿತು. ಈ ಸಲಹೆಗಳು 1933 ರಲ್ಲಿ ಹೊರಡಿಸಿದ ಶ್ವೇತಪತ್ರದಲ್ಲಿ ಪ್ರಕಟಿಸಲಾಯಿತು. ಇದರ ಆಧಾರದ ಮೇಲೆ ಒಂದು ಮಸೂದೆಯನ್ನು ಸಿದ್ಧಪಡಿಸಿ 1935ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಅದನ್ನು ಮಂಡಿಸಲಾಯಿತು. ಮತ್ತು ಆ ಮಸೂದೆ 1935 ರ ಆಗಸ್ಟ್ 2 ರ ಭಾರತ ಸರ್ಕಾರದ ಕಾಯಿದೆಯೆಂದು ಹೆಸರು ಪಡೆಯಿತು. 1935 ರ ಭಾರತ ಸರ್ಕಾರದ ಕಾಯಿದೆ ಒಂದು ಅತ್ಯಂತ ಪ್ರಮುಖ ಮಸೂದೆಯೆಂದು ಹೇಳಲಾಗಿದ್ದು, ಅದು ಮೂರು ಮುಖ್ಯ ಅಂಶಗಳನ್ನು ಒಳಗೊಂಡಿತ್ತು. ಆ ಪ್ರಮುಖ ಅಂಶಗಳೆಂದರೆ 1). ಬ್ರಿಟಿಷ್ ಭಾರತ ಮತ್ತು ದೇಶೀಯ ಸಂಸ್ಥಾನಗಳನ್ನು ಒಳಗೊಂಡ ಫೆಡರಲ್ ವ್ಯವಸ್ಥೆಯನ್ನು ಸ್ಥಾಪಿಸುವುದು 2). ಕೇಂದ್ರದಲ್ಲಿ ದ್ವಿದಳ ಸರ್ಕಾರದ ರಚನೆ (Dyarchy) 3). ಸಂಯುಕ್ತ ರಾಜ್ಯಾಂಗದ ನಿಯಮಕ್ಕೊಳಪಟ್ಟ ಪ್ರತಿ ಪ್ರಾಂತವೂ ಸ್ವಾಯತ್ತತೆ ಪಡೆಯುವುದು.

1935 ರ ಭಾರತ ಸರ್ಕಾರದ ರಾಜ್ಯಾಂಗ ಕಾಯಿದೆಯ ಸುಧಾರಣೆಗಳನ್ನು ಜಾರಿಗೆ ತರುವ ಉದ್ದೇಶದಿಂದಲೇ ಕಾನೂನುಭಂಗ ಚಳವಳಿಯನ್ನು ಕೈಬಿಡಲಾಗಿತ್ತು. ಆದರೆ ಈ ಕಾಯಿದೆಯ ಪ್ರಕಾರ ಜಾರಿಗೆ ಬಂದ ಸುಧಾರಣೆಗಳು ಭಾರತದ ಯಾವ ರಾಜಕೀಯ ಪಕ್ಷಕ್ಕೂ ತೃಪ್ತಿ ತರಲಿಲ್ಲ. ಏಕೆಂದರೆ ಪ್ರಾಂತ ಮತ್ತು ಕೇಂದ್ರ ಸರ್ಕಾರಗಳ ಅಧಿಕಾರವೆಲ್ಲವೂ ಬ್ರಿಟೀಷ್ ಪಾರ್ಲಿಮೆಂಟಿನಲ್ಲಿ ಕೇಂದ್ರೀಕೃತ ಗೊಂಡಿತ್ತು. 1935ರ ಕಾಯಿದೆಯಲ್ಲಿನ ಅಂಶಗಳು ಭಾರತೀಯ ರಾಷ್ಟ್ರೀಯತೆಗೆ ಮಾರಕವಾಗಿದ್ದುವು ಮತ್ತು ಬ್ರೀಟೀಷರ ಒಡೆದು ಆಳುವ ನೀತಿಯನ್ನು ಅವು ಪ್ರತಿಬಿಂಬಿಸುತ್ತಿದ್ದುವು.

ಆದಾಗ್ಯೂ 1935ರ ಶಾಸನದಂತೆ ಪ್ರಾಂತಗಳಲ್ಲಿ ಭಾರತೀಯರಿಗೆ ಹೆಚ್ಚು ಅಧಿಕಾರವಿರುವ ಸರ್ಕಾರಗಳನ್ನು ರಚಿಸಿಕೊಳ್ಳುವ ಹಕ್ಕು ದೊರೆಯಿತು. 1937ರ ಫೆಬ್ರವರಿಯಲ್ಲಿ ನಡೆದ ಚುನಾವಣೆಗಳಲ್ಲಿ 11 ಪ್ರಾಂತ್ಯಗಳ ಪೈಕಿ 7 ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಬಹುಮತ ಗಳಿಸಿತು. ಅದರಂತೆ ಕಾಂಗ್ರೆಸ್ 1937ರ ಜುಲೈನಲ್ಲಿ ಉತ್ತರ ಪ್ರದೇಶ, ಕೇಂದ್ರ ಪ್ರಾಂತ್ಯ, ಬಿಹಾರ, ಒರಿಸ್ಸಾ, ವಾಯುವ್ಯ ಗಡೀ ಪ್ರಾಂತ್ಯ, ಬೊಂಬಾಯಿ ಹಾಗೂ ಮದರಾಸ್ ಪ್ರಾಂತ್ಯಗಳಲ್ಲಿ ಮಂತ್ರಿ ಮಂಡಲ ರಚಿಸುವುದರ ಮೂಲಕ ಅಧಿಕಾರಕ್ಕೆ ಬಂದಿತು. ಹೀಗೆ ಗಳಿಸಿದ ಅಧಿಕಾರವನ್ನು ಕಾಂಗ್ರೆಸ್ ಸ್ವರಾಜ್ಯ ಪಡೆಯಲು ಮತ್ತು ತನ್ನ ರಾಷ್ಟ್ರೀಯ ಯೋಜನೆಗಳನ್ನು ಮತ್ತು ಸಾಮಾಜಿಕ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತರುವುದಕ್ಕೆ ಉಪಯೋಗಿಸಲು ಪ್ರಯತ್ನಿಸಿತು. ಭೂಸುಧಾರಣೆಗಳು, ಗೇಣೀ ಪದ್ಧತಿಯ ಸುಧಾರಣೆ, ಕೃಷಿಕರ ಸಾಲ ಪರಿಹಾರ, ಪ್ರಾಥಮಿಕ ಶಿಕ್ಷಣ, ಗುಡಿಕೈಗಾರಿಕೆಗಳು ಪರಿಶಿಷ್ಟ ವರ್ಗ, ಜಾತಿಗಳ ಪ್ರಗತಿ, ಕಾರ್ಮಿಕರ ಯೋಗಕ್ಷೇಮ ಮುಂತಾದವುಗಳ ಬಗ್ಗೆ ಕಾಂಗ್ರೆಸ್ ತನ್ನ ಕಾರ್ಯಕ್ರಮ



ರೂಪಿಸಿಕೊಂಡಿದ್ದು ಪ್ರಗತಿ ಸಾಧಿಸಲು ಶ್ರಮಿಸುತ್ತಿತ್ತು. ಕಾಂಗ್ರೆಸ್ ಮಂತ್ರಿಮಂಡಲಗಳು, ಕರ್ತವ್ಯ ನಿಷ್ಠೆ ಮತ್ತು ತ್ಯಾಗ ಮನೋಭಾವಗಳಿಂದಾಗಿ ಅತ್ಯಲ್ಪ ಕಾಲದಲ್ಲಿಯೇ ಅಪಾರ ಯಶಸ್ಸು ಗಳಿಸಿದವು ಅಲ್ಲದೆ ಸ್ವಯಂ ಆಡಳಿತ ವ್ಯವಸ್ಥೆಯ ಬಗ್ಗೆ ಕಾಂಗ್ರೆಸ್ ಮಂತ್ರಿ ಮಂಡಲಗಳು ಅತಿಹೆಚ್ಚಿನ ಅನುಭವ ಪಡೆಯಲು ಸಾಧ್ಯವಾಯಿತು. ಪ್ರಾಂತ್ಯಗಳಲ್ಲಿನ ಕಾಂಗ್ರೆಸ್ ಮಂತ್ರಿಮಂಡಲಗಳು ತಮ್ಮ ಕೆಲಸ ಕಾರ್ಯಗಳನ್ನು ದಕ್ಷತೆ ಮತ್ತು ಪ್ರಾಮಾಣಿಕತೆಯಿಂದ ನಿರ್ವಹಿಸಿ, ಎರಡನೇ ಮಹಾಯುದ್ಧ ಪ್ರಾರಂಭವಾಗುವವರೆಗೂ ಅಧಿಕಾರದಲ್ಲಿದ್ದವು.

ಆದರೆ ಮುಸ್ಲಿಮ್ ಲೀಗ್ ಕಾಂಗ್ರೆಸ್ ರಚಿಸಿದ ಮಂತ್ರಿಮಂಡಲಗಳನ್ನು ಸೇರಲಿಲ್ಲ. ಕಾಂಗ್ರೆಸ್ ಸರ್ಕಾರದಿಂದ ಮುಸ್ಲಿಮರಿಗೆ ನ್ಯಾಯ ದೊರಕದೆಂದು ಜಿನ್ನಾ ಬಹಿರಂಗವಾಗಿ ಹೇಳಿದ್ದರು. ಕಾಂಗ್ರೆಸ್ ಪಕ್ಷ ಹಿಂದೂಗಳ ರಾಜಕೀಯ ಪಕ್ಷವೆಂಬ ಭಾವನೆ ಮುಸ್ಲಿಮ್ ಲೀಗ್ ವಲಯಗಳಲ್ಲಿ ಮನೆ ಮಾಡಿಕೊಂಡಿತ್ತು. ಮುಸ್ಲಿಮರು ಬಹುಸಂಖ್ಯಾತರಾಗಿರುವ ಪ್ರಾಂತಗಳನ್ನು ಒಂದುಗೂಡಿಸಿ ಭಾರತದ ಮುಸ್ಲಿಮರಿಗೆ ಪ್ರತ್ಯೇಕ ರಾಷ್ಟ್ರ ನಿರ್ಮಿಸುವುದೊಂದೇ ಅತ್ಯುತ್ತಮವಾದುದೆಂಬುದು ಮುಸ್ಲಿಮ್ ಲೀಗಿನ ಖಚಿತ ಅಭಿಪ್ರಾಯವಾಗಿತ್ತು. ಹೀಗೆ ಭಾರತದ ಬಹುಸಂಖ್ಯಾತ ಮುಸ್ಲಿಮರು ತಮ್ಮ ಪ್ರತ್ಯೇಕ ಮುಸ್ಲಿಮ್ ರಾಜ್ಯ ಬೇಡಿಕೆಯನ್ನು ಪುನರುಚ್ಚರಿಸಿ, ಜಿನ್ನಾರವರ ನಾಯಕತ್ವದಲ್ಲಿ ಪ್ರತ್ಯೇಕವಾದಕ್ಕೆ ಶರಣು ಹೋದರು. ಮುಸ್ಲಿಮ್ ಲೀಗಿನ ಪ್ರತ್ಯೇಕತಾವಾದ ಕಾಂಗ್ರೆಸ್ ಬ್ರಿಟೀಷರ ವಿರುದ್ಧ ನಡೆಸುತ್ತಿದ್ದ ರಾಷ್ಟ್ರೀಯ ಚಳವಳಿಯನ್ನು ಸ್ವಲ್ಪ ಮಟ್ಟಿಗಾದರೂ ದುರ್ಬಲಗೊಳಿಸಿತೆಂದು ಹೇಳಬಹುದು. ಆಂತರಿಕವಾಗಿ ಕಾಂಗ್ರೆಸ್ ಮುಸ್ಲಿಮ್ ಲೀಗಿನ ಪ್ರತ್ಯೇಕತಾ ಸಮಸ್ಯೆಯ ವಿರುದ್ಧವೂ ಹೋರಾಡ ಬೇಕಾಗಿತ್ತು.

ಕಾಂಗ್ರೆಸ್ ಮತ್ತೊಂದು ಸಮಸ್ಯೆಯನ್ನು ಸಹ ಎದುರಿಸಬೇಕಿತ್ತು. ಭಾರತದ ಸ್ವರಾಜ್ಯ ಬೇಡಿಕೆಯ ಬಗ್ಗೆ ಬ್ರಿಟೀಷರ ತಾತ್ಸಾರ ಭಾವನೆ ಮತ್ತು 1935 ರ ಭಾರತ ಸರ್ಕಾರದ ರಾಜ್ಯಾಂಗ ಕಾಯಿದೆಯ ಅತೃಪ್ತಿಕರ ರಾಜಕೀಯ ಸುಧಾರಣೆಗಳಿಂದ ಬೇಸತ್ತಿದ್ದ ಅನೇಕ ಕಾಂಗ್ರೆಸ್ಸಿಗರು ವಿಶೇಷವಾಗಿ ಯುವಕರು ಬ್ರಿಟೀಷರನ್ನು ಮಣಿಸಿ ಸ್ವಾತಂತ್ರ ಪಡೆಯಲು ಹೆಚ್ಚು ಪರಿಣಾಮಕಾರಿಯಾದ ತೀವ್ರ ರೀತಿಯ ಕ್ರಮಗಳೇ ಸರಿಯಾದ ಮಾರ್ಗವೆಂದು ನಂಬಿದ್ದರು. ಅಲ್ಲದೆ ಅವರುಗಳು ಅಂದಿನ ಯುರೊಪಿನ ರಾಜಕೀಯ ಪರಿಸ್ಥಿತಿಯನ್ನು ಸಹ ಗಮನಿಸಿದರು. ಇಟಲಿ ಜರ್ಮನಿ, ಜಪಾನ್‌ಗಳಂತಹ ರಾಷ್ಟ್ರಗಳು ತಮ್ಮ ಸಮಸ್ಯೆಗಳನ್ನು ಪರಿಹಾರಿಸಿಕೊಳ್ಳಲು ಮಿಲಿಟರಿ ನೀತಿ ಅನುಸರಿಸುತ್ತಿದ್ದು, ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧಿಗಳಾಗಿದ್ದವು. ಈ ಬೆಳಿವಣಿಗಯು ಸಹ ಕಾಂಗ್ರೆಸ್ಸಿನ ಉಗ್ರಗಾಮಿಗಳಿಗೆ ಹೊಸ ಶಕ್ತಿ ಮೂಡಿಸಿತು. ಈ ಹಿನ್ನೆಲೆಯಲ್ಲಿ ಕಾಂಗ್ರೆಸ್ಸಿನ ಉಗ್ರವಾದಿಗಳು ಸುಬಾಶ್ ಚಂದ್ರ ಬೋಸರ ನಾಯಕತ್ವದಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಸ್ಥಾಪಿಸಿಕೊಂಡರು. ಕಾಂಗ್ರೆಸ್ ಪ್ರಾಂತ್ಯಗಳಲ್ಲಿ ಮಂತ್ರಿಮಂಡಲ ರಚಿಸುವುದನ್ನು ಈ ಗುಂಪು ವಿರೋಧಿಸಿತ್ತು. 1938 ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸುಭಾಶ್ ಚಂದ್ರ ಬೋಸರನ್ನು ಹರಿಪುರದಲ್ಲಿ ನಡೆದ ಕಾಂಗ್ರೆಸ್ ವಾರ್ಷಿಕ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಆರಿಸಲಾಗಿತ್ತು.

1939 ರಲ್ಲಿ ಮಹಾತ್ಮ ಗಾಂಧೀಜೀಯವರ ಅಭ್ಯರ್ಥಿಯ ವಿರುದ್ಧ ಸುಭಾಶ್ ಚಂದ್ರ ಬೋಸರು ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದರು. ಆದರೆ ಕಾಂಗ್ರೆಸ್‌ನಲ್ಲಿ ಐಕ್ಯತೆ ಮೂಡಿಸಲು ಮತ್ತು



ಮಂದಗಾಮಿಗಳ ಒತ್ತಡಕ್ಕೆ ಮಣಿದು, ಕಾಂಗ್ರೆಸ್‌ನಿಂದ ಹೊರಬಂದು, ಸುಭಾಸ್‌ಚಂದ್ರ ಬೋಸರು ಫಾರ್‌ವರ್ಡ್ ಬ್ಲಾಕ್ ಎಂಬ ಪಕ್ಷ ರಚಿಸಿಕೊಂಡರು. ಕಾಂಗ್ರೆಸಿನಲ್ಲಿ ಮೂಡಿದ ಈ ರೀತಿಯ ಒಡಕುಗಳಿಂದ ಕಾಂಗ್ರೆಸ್ಸಿನ ಕೀರ್ತಿ, ಗೌರವಗಳಿಗೆ ಮತ್ತು ಶಕ್ತಿಗಳಿಗೆ ಒಂದು ರೀತಿಯ ಭಂಗ ಉಂಟಾಯಿತು.

**ಎರಡನೇ ಮಹಾಯುದ್ಧ ಮತ್ತು ರಾಷ್ಟ್ರೀಯ ಚಳವಳಿ:**

1939 ರ ಸೆಪ್ಟೆಂಬರ್‌ನಲ್ಲಿ ಆರಂಭವಾದ ಎರಡನೇ ಮಹಾಯುದ್ಧ ಭಾರತದ ರಾಷ್ಟ್ರೀಯ ಚಳವಳಿಯ ಮೇಲೆ ತೀವ್ರವಾದ ಪರಿಣಾಮ ಉಂಟು ಮಾಡಿತು. 1939ರ ಸೆಪ್ಟೆಂಬರ್ 3 ರಂದು ಬ್ರಿಟನ್, ಫ್ರಾನ್ಸ್‌ಗಳು ಜರ್ಮನಿಯ ವಿರುದ್ಧ ಯುದ್ಧ ಘೋಷಿಸಿದವು. ಬ್ರಿಟಿಷ್ ಸಾಮ್ರಾಜ್ಯದ ರಕ್ಷಣೆಗಾಗಿ ಭಾರತೀಯ ಸೈನಿಕರನ್ನು ಮಧ್ಯ ಪ್ರಾಚ್ಯ, ಸಿಂಗಪೂರ್‌ಗಳಿಗೆ ಕಳುಹಿಸಲಾಯಿತು. ಕೇಂದ್ರ ಸರ್ಕಾರಕ್ಕೆ ಯುದ್ಧ ಸಮಯದಲ್ಲಿ ಹೆಚ್ಚಿನ ಅಧಿಕಾರ ನೀಡಲು ಅನೇಕ ವಿಶೇಷ ಆಜ್ಞೆಗಳನ್ನು ಹೊರಡಿಸಲಾಯಿತು. ಪ್ರಾಂತೀಯ ಸರ್ಕಾರಗಳ ಸ್ವಾಯತ್ತ ಅಧಿಕಾರವನ್ನು ಮೊಟಕುಗೊಳಿಸಿ ಕೇಂದ್ರ ಸರ್ಕಾರಕ್ಕೆ ವಿಶೇಷ ಅಧಿಕಾರ ನೀಡಲಾಯಿತು ವೈಸ್‌ರಾಯ್ ಲಿನ್‌ಲಿತ್‌ಗೊ ತನ್ನ ಯುದ್ಧ ನೀತಿಯ ಬಗ್ಗೆ ಭಾರತೀಯ ಮುಖಂಡರೊಡನೆ ಸಮಾಲೊಚನೆ ಆರಂಭಿಸಿದನು.

ಯುದ್ಧ ಆರಂಭವಾದಾಗ ಸಹಜವಾಗಿಯೇ ಕಾಂಗ್ರೆಸ್ ಮತ್ತು ಸರ್ಕಾರಕ್ಕೆ ಭಿನ್ನಾಭಿಪ್ರಾಯಗಳು ಘರ್ಷಣೆಗಳು ಪ್ರಾರಂಭವಾದವು. ಸರ್ಕಾರದ ಯುದ್ಧ ನೀತಿಯನ್ನು ಕಾಂಗ್ರೆಸ್ ತೀವ್ರವಾಗಿ ಖಂಡಿಸಿತು. ಭಾರತೀಯ ಮುಖಂಡರುಗಳನ್ನು ವಿಶ್ವಾಸಕ್ಕೆ ತೆಗೆದು ಕೊಳ್ಳದೆ, ಅವರೊಡನೆ ಸಮಾಲೋಚನೆ ನಡೆಸದೆ ಭಾರತೀಯರ ಒಪ್ಪಿಗೆ ಇಲ್ಲದೆಯೇ ಭಾರತವನ್ನು ಯುದ್ಧಕ್ಕೆ ದೂಡಲಾಗಿದೆಯೆಂದು ಕಾಂಗ್ರೆಸ್ ತನ್ನ ಆಕ್ರೋಶ ವ್ಯಕ್ತಪಡಿಸಿತು. 1939 ಸೆಪ್ಟೆಂಬರ್‌ನಲ್ಲಿ ವಾರ್ಧಾದಲ್ಲಿ ಸಭೆ ಸೇರಿದ ಕಾಂಗ್ರೆಸ್ ಕಾರ್ಯಕಾರ ಸಮಿತಿ ಸಾಮ್ರಾಜ್ಯಶಾಹಿ ನೀತಿಗನುಸಾರವಾಗಿ ನಡೆಯುತ್ತಿರುವ ಯುದ್ಧಕ್ಕೆ ಸಹಕಾರ ನೀಡಬಾರದೆಂದು ತೀರ್ಮಾನಿಸಿತು. ಸಾಮ್ರಾಜ್ಯಶಾಹಿತ್ವ ಮತ್ತು ಪ್ರಜಾಪ್ರಭುತ್ವಗಳ ಬಗ್ಗೆ, ತನ್ನ ಯುದ್ಧ ನೀತಿಯನ್ನು ಕೂಡಲೇ ಪ್ರಕಟಿಸಬೇಕೆಂದು ಪ್ರಜಾಪ್ರಭುತ್ವ ವ್ಯವಸ್ಥೆಯ ಉಳಿವು ವಿಸ್ತಾರಣೆಯ ಬಗ್ಗೆ ಬ್ರಿಟನ್ ಯುದ್ಧ ನಡೆಸುವುದಾಗಿದ್ದರೆ ಅದು ತನ್ನ ವಸಾಹತುಗಳಲ್ಲಿ ಸಾಮ್ರಾಜ್ಯಶಾಹಿತ್ವ ಕೊನೆಗೊಳಿಸ ಬೇಕು ಮತ್ತು ಕೊಡಲೇ ಭಾರತದಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರದ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂದು ಕಾಂಗ್ರೆಸ್ ಬ್ರಿಟಿಷ್ ಪ್ರಭುತ್ವವನ್ನು ಆಗ್ರಹಪಡಿಸಿತು, ಆದರೆ ಬ್ರಿಟಿಷ್ ಸರ್ಕಾರ ಭಾರತೀಯರ ಬೇಡಿಕೆಗಳನ್ನು ತಿರಸ್ಕರಿಸಿ, ಯುದ್ಧದ ನಂತರ ಡೊಮಿನಿಯನ್ ಸ್ಥಾನಮಾನಗಳನ್ನು ನೀಡಲಾಗುವುದೆಂದು ತಿಳಿಸಿತು. ಆದರೆ ಭಾರತೀಯರು ಯುದ್ಧಕ್ಕೆ ಮೊದಲೇ ಸ್ವಾತಂತ್ರ ನೀಡಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಸರ್ಕಾರದ ಹೇಳಿಕೆಯಿಂದ ಅಸಮಾಧಾನಗೊಂಡ ಕಾಂಗ್ರೆಸ್ ತನ್ನ ವಿರೋಧ ಸೂಚಿಸಲು 1939 ರ ಅಕ್ಟೋಬರ್-ನವಂಬರ್‌ನಲ್ಲಿ ಎಲ್ಲ ಕಾಂಗ್ರೆಸ್ ಮಂತ್ರಿ ಮಂಡಲಗಳು ರಾಜೀನಾಮೆ ಸಲ್ಲಿಸಿದವು. ಇದರಿಂದಾಗಿ ಪ್ರಾಂತ್ಯಗಳ ಸ್ವಾತಂತ್ರ್ಯ ಕೊನೆಗೊಂಡು ಗೌರ್ನರುಗಳ ಏಕತಂತ್ರ ಆಳ್ವಿಕೆ ಮತ್ತೆ



ಪ್ರಾರಂಭವಾಯಿತು.

ಎರಡನೇ ಮಹಾಯುದ್ಧದ ಸಂದರ್ಭ ಉಪಯೋಗಿಸಿಕೊಂಡು, ಮುಸ್ಲಿಮ್ ಲೀಗ್ ತನ್ನದೇ ಕಾರ್ಯಕ್ರಮ ರೂಪಿಸಿಕೊಂಡಿತ್ತು. ಯುದ್ಧ ಅರಂಭವಾದಗ ಜಿನ್ನಾ ಅವರು ಪೋಲೆಂಡ್, ಬ್ರಿಟನ್, ಫ್ರಾನ್ಸ್‌ಗಳ ಬಗ್ಗೆ ತನ್ನ ಅನುಕಂಪ ವ್ಯಕ್ತಪಡಿಸಿದರು. ಯುದ್ದದಲ್ಲಿ ಬ್ರಿಟೀಷರು ಜಯಗಳಿಸಬೇಕಾದರೆ ಮುಸ್ಲಿಮ್ ಲೀಗಿನ ಮೂಲಕ ಭಾರತೀಯ ಮುಸ್ಲಿಮರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕೆಂದು ಬ್ರಿಟನ್ನನು ಒತ್ತಾಯಿಸಿದರು. ಭಾರತದಲ್ಲಿ ಯಾವುದೇ ರಾಜ್ಯಾಂಗ ರಚಿಸುವುದಕ್ಕೆ ಮೊದಲು ಮುಸ್ಲಿಮ್ ಲೀಗಿನ ಒಪ್ಪಿಗೆ ಪಡೆಯಬೇಕೆಂದು ಆಗ್ರಹ ಪಡಿಸಿದರು. ಕಾಂಗ್ರೆಸ್ ಮಂತ್ರಿ ಮಂಡಲಗಳು ರಾಜೀನಾಮೆ ನೀಡಿದಾಗ, 1939ರ ಡಿಸೆಂಬರ್ ಎರಡರಂದು ಕಾಂಗ್ರೆಸ್ಸಿನ ಕಿರುಕುಳದಿಂದ ಪಾರಾದವೆಂದು ಮುಸ್ಲಿಮ್ ಲೀಗ್, ವಿಮೋಚನಾ ದಿನ ಆಚರಿಸಿತು. 1940 ರ ಮಾರ್ಚಿಯಲ್ಲಿ ಲಾಹೋರ್‌ನಲ್ಲಿ ನಡೆದ ಮುಸ್ಲಿಮ್ ಲೀಗಿನ ಅಧಿವೇಶನದಲ್ಲಿ, ಮುಸ್ಲಿಮರಿಗೆ ಪ್ರತ್ಯೇಕ ಸ್ವತಂತ್ರ ರಾಜ್ಯ ಬೇಕೆಂದು ನಿರ್ಣಯ ಕೈಗೊಳ್ಳಲಾಯಿತು. ಸರ್ವಸ್ವತಂತ್ರ ಪಾಕೀಸ್ತಾನ್ ರಾಜ್ಯ ಅಸ್ಥಿತ್ವಕ್ಕೆ ಬರಬೇಕೆಂಬುದು ಮುಸ್ಲಿಮ್ ಲೀಗಿನ ಉದ್ದೇಶವಾಗಿತ್ತು. ಇದಾದ ನಂತರ ಕಾಂಗ್ರೆಸ್ ಮತ್ತು ಮುಸ್ಲಿಮ್ ಲೀಗುಗಳಲ್ಲಿನ ಭಿನ್ನಾಭಿಪ್ರಾಯಗಳನ್ನು ತೊಡೆದು ಹಾಕುವ ಎಲ್ಲ ಪ್ರಯತ್ನಗಳು ವಿಫಲವಾದುವು. ಮುಸ್ಲಿಮರ ವಿರೋಧವಿದೆಯೆಂಬ ಕಾರಣಕ್ಕಾಗಿಯೇ ಬ್ರಿಟೀಷರು ಭಾರತದಲ್ಲಿ ರಾಷ್ಟ್ರೀಯ ಸರ್ಕಾರವನ್ನು ಜಾರಿಗೆ ತರಲು ಬಯಸಲಿಲ್ಲ.

**1940 ರ ಆಗಸ್ಟ್ ಹೇಳಿಕೆ:**

ಬ್ರಿಟೀಷ್ ಸರ್ಕಾರ ಭಾರತೀಯರ ಮನವೊಲಿಸಿಕೊಂಡು ಭಾರತ ಯುದ್ಧದಲ್ಲಿ ಸಕ್ರಿಯ ಪಾತ್ರ ವಹಿಸುವಂತೆ ಮಾಡುವ ಪ್ರಯತ್ನವನ್ನು ಮುಂದುವರೆಸಿತು. ಭಾರತದ ಮುಖಂಡರುಗಳಾದ ಗಾಂಧೀಜಿ ಜವಾಹರಲಾಲ್ ನೆಹರೂ, ರಾಜೇಂದ್ರಪ್ರಸಾದ್, ಸುಬಾಷ್ ಚಂದ್ರ ಬೋಸ್, ಜಿನ್ನಾ, ಅಂಬೇಡ್ಕರ್ ಮುಂತಾದವರೊಡನೆ, ವೈಸ್ ರಾಯ್ ಅವರು ಸಮಾಲೋಚನೆ ನಡೆಸಿ, ಯುದ್ಧದಲ್ಲಿ ಅವರ ಸಹಕಾರ ಕೋರಿದರು. 1940 ರ ಅಗಸ್ಟ್ 8 ರಂದು ಒಂದು ಪ್ರಕಟಣೆ ಹೊರಡಿಸಿ, ಭಾರತದಲ್ಲಿ ರಾಷ್ಟ್ರೀಯ ಸರ್ಕಾರ ಸ್ಥಾಪನೆಯಾದರೆ, ಭಾರತದ ರಾಷ್ಟ್ರೀಯ ಜೀವನದಲ್ಲಿ ಸಕ್ರಿಯಪಾತ್ರ ವಹಿಸುತ್ತಿರುವ ಮತ್ತೊಂದು ಪ್ರಬಲವಾದ ವರ್ಗ ಹೊಸ ರಾಷ್ಟ್ರೀಯ ಸರ್ಕಾರದ ಅಧಿಕಾರವನ್ನು ಪುರಸ್ಕರಿಸುವುದು ಅಸಾಧ್ಯವೆಂದು ಹೇಳಿತು. ಅಂತಹ ಪ್ರಬಲವಾದ ರಾಜಕೀಯ ವರ್ಗವೆಂದರೆ ಭಾರತೀಯ ಮುಸ್ಲಿಮರು. ಅದೂ ಅಲ್ಲದೆ ಬ್ರಿಟನ್ನು ಯುದ್ಧದ ಸಮಯದಲ್ಲಿ ಅಳಿವು ಉಳಿವಿನ ಪ್ರಶ್ನೆ ಎದುರಿಸುತ್ತಿರುವಾಗ ರಾಜ್ಯಾಂಗ ರಚನೆಯ ಬಗ್ಗೆ ಸರಿಯಾದ ನಿರ್ಧಾರಕ್ಕೆ ಬರುವುದೂ ಸಹ ಸಾಧ್ಯವಿರಲಿಲ್ಲ. ಆದಾಗ್ಯೂ ಆಗಸ್ಟ್ ಪ್ರಕಟಣೆ ಭಾರತದಲ್ಲಿ ಡೊಮಿನಿಯನ್ ಸ್ಥಾನಮಾನಗಳ ಬಗ್ಗೆ ಚಿಂತಿಸುವುದೇ ಬ್ರಿಟನ್ನಿನ ಗುರಿ ಎಂದೂ ಮತ್ತೆ ತಿಳಿಸಿತು. ಆಗಸ್ಟ್ 8 ರ ಪ್ರಣಾಳಿಕೆ ಕೆಲವು ರಿಯಾತಿಗಳನ್ನು ಸಹ ಪ್ರಕಟಿಸಿತು. ಆ ರಿಯಾಯಿತಿಗಳೆಂದರೆ 1). ಭಾರತಕ್ಕೆ ಹೊಸ ಸಂವಿಧಾನ ರೂಪಿಸಲು, ಯುದ್ಧದ ನಂತರ ಒಂದು ಸಂಯುಕ್ತ ಸಮಿತಿ ರಚಿಸುವುದು 2). ಭಾರತದ ಎಲ್ಲ ಪ್ರಮುಖ ರಾಜಕೀಯ ಪಕ್ಷಗಳಿಂದ ಹೆಚ್ಚುವರಿ



ಸದಸ್ಯರನ್ನು ನೇಮಿಸಿಕೊಂಡು ವೈಸರಾಯರ ಕಾರ್ಯ ನಿರ್ವಾಹಕ ಮಂಡಲಿಯನ್ನು ವಿಸ್ತರಿಸುವುದು ಮತ್ತು 3) ಬ್ರಿಟಿಷ್ ಭಾರತ ಮತ್ತು ದೇಶೀಯ ಸಂಸ್ಥಾನಗಳ ಪ್ರತಿನಿಧಿಗಳನ್ನೊಳಗೊಂಡ ಯುದ್ಧಸಲಹಾ ಸಮಿತಿಯನ್ನು ರಚಿಸುವುದು.

ಆಗಸ್ಟ್ ಪ್ರಕಟಣೆಯನ್ನು ಕಾಂಗ್ರೆಸ್ ತಿರಸ್ಕರಿಸಿತು. 1940 ರ ಅಕ್ಟೋಬರ್‌ನಲ್ಲಿ ಗಾಂಧೀಜಿಯವರು ಬ್ರಿಟಿಷರ ಯುದ್ಧ ನೀತಿಯನ್ನು ವಿರೋಧಿಸಲು ನಿರ್ಧರಿಸಿದರು. ವೈಯಕ್ತಿಕ ಸತ್ಯಾಗ್ರಹ ನಡೆಸುವುದರ ಮೂಲಕ ಬ್ರಿಟೀಷರ ಯುದ್ಧ ನೀತಿಯನ್ನು ವಿರೋಧಿಸುವುದು ಗಾಂಧೀಜೀಯವರ ಉದ್ದೇಶವಾಗಿತ್ತು. ಆಚಾರ್ಯವಿನೊಭಾ ಭಾವೆ ಅವರಿಂದ ಉದ್ಘಾಟಿಸಲ್ಪಟ್ಟ ವೈಯಕ್ತಿಕ ಕಾನೂನು ಭಂಗ ಚಳವಳಿಯ ಕಾರ್ಯಕ್ರಮವೊಂದನ್ನು ರೂಪಿಸಲಾಯಿತು. ಅದರಂತೆ ದೇಶದಾದ್ಯಂತ ವೈಯಕ್ತಿಕ ಸತ್ಯಾಗ್ರಹ ಚಳವಳಿಯಲ್ಲಿ ಸಹಸ್ರಾರು ಸತ್ಯಾಗ್ರಹಿಗಳು ಗಾಂಧೀಜೀಯವರ ನಿಯಮಗಳಿಗನುಸಾರವಾಗಿ ತಮ್ಮ ಹೋರಾಟ ಪ್ರಾರಂಭಿಸಿದರು. ಒಂದು ತಂಡ ಜೈಲಿಗೆ ಹೋದ ಕೂಡಲೇ ಮತ್ತೊಂದು ತಂಡದ ಸತ್ಯಾಗ್ರಹಿಗಳು ಸಿದ್ಧವಾಗಿರುತ್ತಿದ್ದರು. ಹಾಗೆ ಸುಮಾರು 30,000 ಜನರು ಸೆರೆಮನೆಗೆ ಹೋದರು.

**1942 ರ ಕ್ರಿಪ್ಸ್ ನಿಯೋಗ:**

ಈ ಮಧ್ಯೆ 1940 ರ ನಂತರ ಮಿತ್ರರಾಷ್ಟ್ರಗಳು ಯುರೋಪು ಹಾಗೂ ಏಷ್ಯದ ಯುದ್ಧ ವಲಯಗಳಲ್ಲಿ ಸಂಕಟದ ಪರಿಸ್ಥಿತಿ ಎದುರಿಸಬೇಕಾಯಿತು. 1941 ರ ಡಿಸೆಂಬರ್‌ನಲ್ಲಿ ಪೆಸಿಫಿಕ್ ಸಾಗರದಲ್ಲಿನ ಅಮೆರಿಕಾದ ನೌಕಾನೆಲೆ ಪರ್ಲ್‌ಹಾರ್ಬರ್ ಮೇಲೆ ಜಪಾನ್ ಧಾಳಿ ನಡೆಸಿ ಅಮೆರಿಕದ ಶಕ್ತಿ ಸಾಮರ್ಥ್ಯಗಳಿಗೆ ದೊಡ್ಡ ಸವಾಲು ಒಡ್ಡಿತಲ್ಲದೆ, ದೂರ ಪ್ರಾಚ್ಯದಲ್ಲಿ ತನ್ನ ಆಕ್ರಮಣಕಾರಿ ನೀತಿಯನ್ನು ಬಲಪಡಿಸಿಕೊಂಡಿತು. 1942 ಮಾರ್ಚ ತಿಂಗಳ ವೇಳೆಗೆ ಜಪಾನ್, ಫಿಲಿಪೈನ್ಸ್, ಇಂಡೋನೇಶಿಯಾ, ಇಂಡೋಚೀನಾ, ಮಲಯ, ಸಿಂಗಪೂರ್ ಹಾಗೂ ಅಂಡಮಾನ್ ನಿಕೋಬಾರ್ ದ್ವೀಪಗಳ ಮೇಲೆ ತನ್ನ ಮಿಲಿಟರಿ ಹಾಗೂ ರಾಜಕೀಯ ಹಿಡಿತ ಸಾಧಿಸಿತು. 1942 ರ ಮಾರ್ಚ್ 8 ರಂದು ಜಪಾನಿನ ಸೇನೆಗಳು ಸಿಂಗಪೂರ್ ಪ್ರವೇಶಿಸಿ, ಬರ್ಮವನ್ನು ವಶಪಡಿಸಿಕೊಳ್ಳುವ ಯೋಜನೆ ಹೊಂದಿದ್ದವು. ಬರ್ಮ ಜಪಾನೀಯರ ವಶವಾದರೆ ಭಾರತ ಮತ್ತು ಬ್ರಿಟೀಷ್ ಸಾಮ್ರಾಜ್ಯಕ್ಕೆ ಭಾರಿ ಆಘಾತ ಉಂಟಾಗುವ ಸಾಧ್ಯತೆಗಳು ಹೆಚ್ಚಾದವು. ಇದರಿಂದ ಪಶ್ಚಿಮ ಹಿಂದೂ ಮಹಾಸಾಗರದಲ್ಲಿ ಜಪಾನಿನ ಪ್ರಭುತ್ವ ಬೆಳೆದು ಮಧ್ಯಪ್ರಾಚ್ಯ ರಾಷ್ಟ್ರಗಳಲ್ಲಿ ಮಿತ್ರರಾಷ್ಟ್ರಗಳ ಪ್ರಾಬಲ್ಯ ಕುಸಿಯುವ ಸೂಚನೆಗಳು ಹೆಚ್ಚಾದವು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಭಾರತದೊಡನೆ ಶತ್ರುತ್ವ ಮುಂದುವರೆಸುವುದು ಬ್ರಿಟೀಷರಿಗೆ ಹೆಚ್ಚು ಅಪಾಯಕಾರಿಯಾಗುತ್ತಿತ್ತು. ಆದ್ದರಿಂದ ಆಗಿನ ಬ್ರಿಟೀಷ್ ಪ್ರಧಾನಿ ಚರ್ಚಿಲ್ ತನ್ನ ಸಾಮ್ರಾಜ್ಯಶಾಹಿ ಧೋರಣೆಯನ್ನು ಬದಲಿಸಿ ಭಾರತೀಯರನ್ನು ಸಮಾಧಾನಗೊಳಿಸುವ ಆಲೋಚನೆ ಮಾಡಬೇಕಾಯಿತು. ಬ್ರಿಟಿಷ ಸರ್ಕಾರ ಈ ನಿಟ್ಟಿನಲ್ಲಿ ಕಾರ್ಯೋನ್ಮುಖವಾಯಿತು. ವೈಯಕ್ತಿಕ ಸತ್ಯಾಗ್ರಹದಲ್ಲಿ ತೊಡಗಿದ್ದವರನ್ನು ಸೆರೆಮನೆಗೆ ದೂಡಿದ್ದ ಸರ್ಕಾರ 1941 ಡಿಸೆಂಬರ್‌ನಲ್ಲಿ, ಅನೇಕ ಸತ್ಯಾಗ್ರಹಿಗಳನ್ನು ಬಿಡುಗಡೆ ಮಾಡಿತು. 1941 ಡಿಸೆಂಬರ್ 4 ರಂದು ನೆಹರೂ ಮೌಲಾನಾ ಕಲಂ ಆಜಾದ್ ಮುಂತಾದವರೆಲ್ಲರನ್ನು ಜೈಲಿನಿಂದ



ಬಿಡುಗಡೆ ಮಾಡಿತು. ಚೀನಾದ ಅಧ್ಯಕ್ಷ ಚಿಯಾಂಗ್-ಕೈ-ಶೀಕ್ ಅವರ ಮೂಲಕ ಭಾರತೀಯರನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿತು. ಬ್ರಿಟಿಷ್ ಸರ್ಕಾರ ಚಿಯಾಂಗ್ ಕೈ ಷೇಕ್ ಅವರು ತಮ್ಮ ಪತ್ನಿಯೊಡನೆ ಭಾರತಕ್ಕೆ 1942 ರ ಫೆಬ್ರವರಿಯಲ್ಲಿ ಆಗಮಿಸಿ ಭಾರತೀಯ ಮುಖಂಡರೊಡನೆ ಜಪಾನಿನ ಆಕ್ರಮಣದಿಂದ ಭಾರತಕ್ಕೆ ಬಂದೊದಗುವ ವಿಪತ್ತಿನ ಬಗ್ಗೆ ಚರ್ಚಿನಡೆಸಿ ಬ್ರಿಟೀಷರೊಡನೆ ಒಪ್ಪಂದಕ್ಕೆ ಬರುವುದು ಸೂಕ್ತವೆಂದು ಸೂಚಿಸಿದರು. ಚಿಯಾಂಗ್ ಕೈ ಶೇಕ್ ಮತ್ತು ಅಮೇರಿಕದ ಅಧ್ಯಕ್ಷ ರೂಸ್ವೆಲ್ಟ್ ಅವರುಗಳು, ಭಾರತದ ಸಮಸ್ಯೆಯನ್ನು ಶಾಂತಿಯುತವಾಗಿ ಬಗೆಹರಿಸುವುದು ಸೂಕ್ತವೆಂದು ಬ್ರಿಟೀಷ್ ಸರ್ಕಾರಕ್ಕೆ ಸೂಚಿಸಿದರು. ಈ ಎಲ್ಲ ಅಂಶಗಳನ್ನು ಪರಿಗಣಿಸಿ ಬ್ರಿಟನ್ನಿನ ಪ್ರಧಾನಿ ಚರ್ಚಿಲ್ ಅವರು ಭಾರತದಲ್ಲಿನ ರಾಜಕೀಯ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳುವ ಉದ್ದೇಶದಿಂದ ಬ್ರಿಟೀಷ್ ಮಂತ್ರಿ ಮಂಡಲದ ಸದಸ್ಯ ಸರ್ ಸ್ಟಾಫರ್ಡ ಕ್ರಿಫ್ಸ್ ಅವನ ನೇತೃತ್ವದಲ್ಲಿ 1942 ರ ಮಾರ್ಚ್ 11 ರಂದು ಒಂದು ನಿಯೋಗ ನೇಮಿಸಿದರು.

1942 ಮಾರ್ಚ್ 22 ರಂದು ಭಾರತಕ್ಕೆ ಬೇಟಿ ನೀಡಿದ ಕ್ರಿಪ್ಸ್ ಭಾರತದ ವಿವಿಧ ರಾಜಕೀಯ ಪಕ್ಷಗಳ ಮುಖಂಡರೊಡನೆ ಚರ್ಚೆ ನಡೆಸಿದ ನಂತರ ಕೆಲವು ಪ್ರಮುಖ ಸಲಹೆಗಳನ್ನು ಮಾಡಿದನು ಕ್ರಿಪ್ಸ್ ನಿಯೋಗದ ಸಲಹೆಗಳೆಂದರೆ:(1) ಯುದ್ಧ ಕೊನೆಯಾದ ಕೊಡಲೇ ಭಾರತಕ್ಕೆ ಡೊಮಿನಿಯನ್ ಅಂತಸ್ತು ನೀಡುವುದು 2) ಭಾರತ ತನ್ನ ಇಷ್ಟಬಂದಾಗ ಬ್ರಿಟೀಷ್ ಕಾಮನ್ ವೆಲ್ತನ್ನು ಬಿಟ್ಟು ಪ್ರತ್ಯೇಕವಾಗಲು ಅಧಿಕಾರ ಪಡೆಯುವುದು 3) ಭಾರತದ ರಾಜ್ಯಾಂಗವನ್ನು ಭಾರತೀಯ ಮುಖಂಡರೇ ರಚಿಸಿಕೊಳ್ಳುವುದು. 4) ಯುದ್ಧದ ಸಮಯದಲ್ಲಿ, ಭಾರತೀಯ ರಾಜಕೀಯ ಪಕ್ಷಗಳ ಮುಖಂಡರನ್ನು ಒಳಗೊಂಡಂತೆ ವೈಸ್‌ರಾಯ್ ಅವರ ಕಾರ್ಯಕಾರಿ ಸಮಿತಿಯನ್ನು ಹೊಸದಾಗಿ ರಚಿಸುವುದು 5) ಭಾರತದ ಹೊಸ ರಾಜ್ಯಾಂಗವು ಸಂಯುಕ್ತ ಸ್ವರೂಪದಾಗಿದ್ದು ಅಂತಹ ಸಂಯುಕ್ತ ರಾಷ್ಟಕ್ಕೆ ಸೇರುವ ಸಂಸ್ಥಾನಗಳು ತಮಗೆ ಇಷ್ಟ ಬಂದಾಗ ಸಂಯುಕ್ತ ಒಕ್ಕೂಟದಿಂದ ಪ್ರತ್ಯೇಕವಾಗಿ ಹೊರ ಬರಲು ಅಧಿಕಾರ ಹೊಂದಿರಬೇಕು 6) ಯುದ್ಧ ಮುಗಿಯುವವರೆಗೂ ಭಾರತದ ರಕ್ಷಣೆಯ ಮೇಲ್ವಿಚಾರಣೆಯನ್ನು ಬ್ರಿಟಿಷ್ ಮಂತ್ರಿ ಮಂಡಲ ನೋಡಿಕೊಳ್ಳುವುದು.

ಅದರೆ ಕ್ರಿಪ್ಸ್ ನಿಯೋಗದ ಸಲಹೆಗಳನ್ನು ಭಾರತದ ಯಾವ ರಾಜಕೀಯ ಪಕ್ಷವೂ ಒಪ್ಪಿಕೊಳ್ಳಲಿಲ್ಲ. ಕಾಂಗ್ರೆಸ್ ಕ್ರಿಪ್ಸ್ ನಿಯೋಗದ ಸಲಹೆಗಳನ್ನು ತೀವ್ರವಾಗಿ ಖಂಡಿಸಿತು. ಭಾರತದಲ್ಲಿನ ಪ್ರಬಲ, ಪ್ರಗತಿಪರವಾದ ಮತ್ತು ಐಕ್ಯತಾ ಭಾವನೆಯಿಂದ ಕೂಡಿದ ರಾಷ್ಟ್ರೀಯ ವ್ಯವಸ್ಥೆಯನ್ನು ಹಾಳುಮಾಡಲು ಪ್ರತಿಗಾಮಿಶಕ್ತಿಗಳು ಹೊಂಚುಹಾಕುತ್ತಿದ್ದಾರೆಂದು, ಕಾಂಗ್ರೆಸ್ ತನ್ನ ಆತಂಕ ವ್ಯಕ್ತಪಡಿಸಿತು. ಯಾವ ರಾಜ್ಯ ಪ್ರಾಂತ್ಯವೂ ಹೊರಗುಳಿಯದ ಅಖಿಲ ಭಾರತ ಸಂಯುಕ್ತ ಒಕ್ಕೂಟದ ಸ್ಥಾಪನೆ ಕಾಂಗ್ರೆಸ್ಸಿನ ಅಶಯವಾಗಿತ್ತು. ಆದರೆ ಕ್ರಿಪ್ಸ್ ನಿಯೋಗದ ಸಲಹೆ ಇದಕ್ಕೆ ತದ್ವಿರುದ್ದವಾಗಿತ್ತು. ಆದೂ ಅಲ್ಲದೆ ಯುದ್ಧ ಮುಗಿದ ನಂತರವೇ ಭಾರತದ ಬೇಡಿಕೆಗಳನ್ನು ಪೂರೈಸಲಾಗುವುದೆಂಬ ಬ್ರಿಟಿಷ್ ಆಳರಸರ ಧೋರಣೆ ಕಾಂಗ್ರೆಸ್ ನಾಯಕರಿಗೆ ತುಂಬಾ ನಿರಾಶೆ ಉಂಟುಮಾಡಿತು. ಕ್ರಿಪ್ಸ್ ನಿಯೋಗದ ಸಲಹೆಗಳು



ಭಾರತಕ್ಕೆ ಅರೆಬರೆ ಸ್ವಾತಂತ್ರ್ಯ ಮಾತ್ರ ತಂದು ಕೊಡುವುದಾಗಿತ್ತು. ರಾಜಕೀಯ ಹಾಗೂ ಆರ್ಥಿಕ ಐಕ್ಯತೆಗೆ ಯಾವ ಸಲಹೆಯೂ ಕ್ರಿಪ್ಸ್ ನಿಯೋಗ ಮಾಡಿರಲಿಲ್ಲ. ಸಂಸ್ಥಾನದ ರಾಜ್ಯಗಳು ಪ್ರಬಲರಾಗುವುದಕ್ಕೆ ಅವಕಾಶ ಕಲ್ಪಿಸಲಾಗಿತ್ತು. ಭಾರತದಲ್ಲಿ ಒಡುಕು ಮೂಡಿಸಿ ಭಾರತದ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯ ಭಾವನೆಗಳನ್ನು ವಿರೋದಿಸುತ್ತಿದ್ದ ಶಕ್ತಿಗಳಿಗೆ ಮತ್ತಷ್ಟು ಬೆಂಬಲ ನೀಡುವ ಬ್ರಿಟೀಷರ ಕುತಂತ್ರವೇ ಕ್ರಿಪ್ಸ್ ಸಲಹೆಗಳಿಗೆ ಬುನಾದಿಯಾಗಿತ್ತು. ಇದರಿಂದಾಗಿ ಕಾಂಗ್ರೆಸ್ 1942 ಏಪ್ರಿಲ್ 11 ರಂದು ಕ್ರಿಪ್ಸ್ ನಿಯೊಗದ ಸಲಹೆಗಳನ್ನು ಸಂಪೂರ್ಣವಾಗಿ ತಿರಸ್ಕರಿಸುವ ನಿರ್ಣಯ ಕೈಗೊಂಡಿತು.

ಮುಸ್ಲಿಮರಿಗೆ ಪ್ರತ್ಯೆಕವಾಗಿ ಪಾಕೀಸ್ಥಾನ್ ರಾಜ್ಯದ ಸ್ಪಷ್ಟ ಸೂಚನೆಗಳಲ್ಲದ್ದರಿಂದ ಮುಸ್ಲಿಮ್ ಲೀಗ್ ಕ್ರಿಪ್ಸ್ ಸಲಹೆಗಳನ್ನು ತಿರಸ್ಕರಿಸಿತು  ಅದೇ ರೀತಿ ಹಿಂಧೂ ಮಹಾಸಬೆ, ಸಿಕ್ಕರು ಪರಿಶಿಷ್ಟವರ್ಗ ಮುಂತಾದ ಪಕ್ಷಗಳು, ವರ್ಗಗಳು ಸಹ ಕ್ರಿಪ್ಸ್‌ನ್ನಿಯೋಗದ ಸಲಹೆಗಳನ್ನು ತಿರಸ್ಕರಿಸಿದರು.

ಕಾಂಗ್ರೆಸ್ಸಿನ ಧ್ಯೇಯಗಳಾದ ಭಾರತದ ಸ್ವಾತಂತ್ರ್ಯ, ರಾಷ್ಟ್ರೀಯ ಐಕ್ಯತೆ ಇವುಗಳನ್ನು ಕಡೆಗಣಿಸಿದ್ದರಿಂದ ಹಾಗೂ  ಭಾರತಕ್ಕೆ ಸ್ವತಂತ್ರ್ಯ ನೀಡಬಾರದೆಂಬ ಬ್ರಿಟಿಷ್ ಪ್ರಧಾನಿಯ ಮೊಂಡು ತನದಿಂದಾಗಿ ಕ್ರಿಪ್ಸ್ ನಿಯೊಗ ನಿರರ್ಥಕವೆನಿಸಿತು ಬ್ರಿಟಿಷ್ ಸಾಮ್ರಾಜ್ಯದ ವಿನಾಶಕ್ಕೆ ನಾನೆಂದೂ ಕಾರಣನಾಗಲಾರೆ ಎಂದು ಹೇಳುತ್ತಿದ್ದ ಮತ್ತು ಗಾಂಧೀಯವರನ್ನು, ಭಾರತದ ರಾಷ್ಟ್ರೀಯ ಕಾಂಗ್ರೆಸ್ಸನ್ನು, ಮತ್ತು ಅದರ ರಚನೆಯ ಎಲ್ಲ ಹುಟ್ಟನ್ನು ಇಂದೋ ನಾಳೆಯೋ ಅಡಗಿಸಲೇಬೇಕು, ಮುಂತಾದ ಮುರ್ಖತನದ ಹೇಳಿಕೆಗಳನ್ನು ನೀಡುತ್ತಿದ್ದ ಹಠಮಾರಿ ಸ್ವಭಾವದ ಬ್ರಿಟಿಷ್ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್ ಮತ್ತು ಅವನ ಸಾಮ್ರಾಜ್ಯದ ವಿರುದ್ದ, ಭಾರತೀಯರು ತಮ್ಮ ಅಂತಿಮ ಹೋರಾಟವನ್ನು ಮತ್ತಷ್ಟು ದಿಟ್ಟತನದಿಂದ, ದೃಢ ಸಂಕಲ್ಪದಿಂದ ಮುಂದುವರಿಸಲೇಬೇಕಾಯಿತು ಭಾರತೀಯರ ಅಂತಿಮ ಘಟ್ಟದ ಹೊರಾಟವೇ ಭಾರತ ಬಿಟ್ಟು ತೊಲಗಿ ಚಳವಳಿ.

**ಭಾರತ ಬಿಟ್ಟು ತೊಲಗಿ:** ಕ್ರಿಪ್ಸ್ ಸಂಧಾನ ವಿಫಲವಾದ ಹಿನ್ನೆಲೆಯಲ್ಲಿ ಹೋರಾಟಕ್ಕೆ ಕರೆ ಕೊಡುವುದು ಕಾಂಗ್ರೆಸ್ಸಿಗೆ ಅನಿವಾರ್ಯವಾಯಿತು. ಆಗಸ್ಟ್ 8, 1942 ರಂದು 'ಭಾರತ ಬಿಟ್ಟು ತೊಲಗಿ' ಚಳುವಳಿಗೆ ಕರೆ ನೀಡುವ ನಿರ್ಣಯವನ್ನು ಅಂಗೀಕರಿಸಿತು. ಈ ವೇಳೆಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಸಾಕಷ್ಟು ಹೊಸ ಬೆಳವಣಿಗೆಗಳು ಉಂಟಾಗಿದ್ದವು. ಕಾಂಗ್ರೆಸ್‌ಗೆ ಇದರ ಅರಿವಿತ್ತು. ಯುದ್ಧದ ಸಂದರ್ಭದಲ್ಲಿ ಬ್ರಿಟಿಷ್ ಸರಕಾರವನ್ನು ಇಕ್ಕಟ್ಟಿಗೆ ನೂಕುವುದು ಅದರ ಗುರಿಯಾಗಿತ್ತು. ಇದರಿಂದ ಸರಕಾರ ಒಂದು ಹೊಂದಾಣಿಕೆಗೆ ಬರಲು ಸಾಧ್ಯವಾಗುತ್ತದೆ ಎಂಬುದು ಕಾಂಗ್ರೆಸ್ಸಿನ ನಿಲುವಾಗಿತ್ತು. ಕ್ಷಿಪ್ರ ಹೋರಾಟಕ್ಕೆ ಕರೆ ನೀಡಿತು. "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಮತ್ತು "ಮಾಡು ಇಲ್ಲವೇ ಮಡಿ" ಎಂಬ ಘೋಷಣೆಗಳನ್ನು ಗಾಂಧೀಜಿ ನೀಡಿದರು. ಬ್ರಿಟಿಷರನ್ನು ದೇಶದಿಂದ ಹೊರದಬ್ಬುವ ಕಠೋರತೆ ಮೊದಲ ಘೋಷಣೆಯಲ್ಲಾದರೆ, ಜನತೆ ಯಾವ ತ್ಯಾಗಕ್ಕೂ ಸಿದ್ಧವಾಗಬೇಕೆಂಬ ಕರೆ ಎರಡನೆಯ ಘೋಷಣೆಯಲ್ಲಿತ್ತು. ಆದರೆ ಹೋರಾಟಕ್ಕೆ ಸಾಕಷ್ಟು ತಯಾರಿಯೇನೂ ಆಗಿರಲಿಲ್ಲವಾದರೂ ಜನರು ಹೋರಾಟಕ್ಕೆ ಸಿದ್ಧವಾಗಿದ್ದರು. ಸರಕಾರ ಹೋರಾಟವನ್ನು ಮುರಿಯಲು ತಕ್ಷಣ ನಿರ್ಧರಿಸಿತು. ಗಾಂಧೀಜಿ





ಸಹಿತ ಇತರ ನಾಯಕರನ್ನು ಸರಕಾರ ಬಂಧಿಸಿತು. ಕಾಂಗ್ರೆಸ್ ಒಂದು ಕಾನೂನುಬಾಹಿರ ಸಂಸ್ಥೆ ಎಂದು ಘೋಷಿಸಲಾಯಿತು. ಹೋರಾಟಗಾರರಿಗೆ ನಾಯಕತ್ವ ಇಲ್ಲದಂತಾಯಿತು. ಚಳುವಳಿ ಹಿಂಸಾತ್ಮಕ ಸ್ವರೂಪ ತಾಳಿ, ಅಲ್ಲಲ್ಲಿ ಘರ್ಷಣೆಗಳಾದವು. ಪೋಲೀಸ್ ಮತ್ತು ಸೈನ್ಯದ ನೆರವಿನಿಂದ ಚಳುವಳಿಯನ್ನು ಅಮಾನುಷವಾಗಿ ಹತ್ತಿಕ್ಕಲಾಯಿತು. ಅಧಿಕೃತ ಅಂದಾಜುಗಳ ಪ್ರಕಾರ 1942 ರ ಕೊನೆಯ 5 ತಿಂಗಳಲ್ಲಿ 60229 ಜನರನ್ನು ಬಂಧಿಸಲಾಯಿತು. 18000 ಜನರನ್ನು ವಿಚಾರಣೆ ಇಲ್ಲದೆ ಸೆರೆಮನೆಗೆ ಸೇರಿಸಲಾಯಿತು. 1940 ಜನರು ಗುಂಡೇಟಿನಿಂದ ಕೊಲ್ಲಲ್ಪಟ್ಟರು ಮತ್ತು 1650 ಜನರು ಗಾಯಗೊಂಡರು. ಸರಿಯಾದ ನಾಯಕತ್ವದ ಕೊರತೆ, ನಿರ್ದಿಷ್ಟ ಕಾರ್ಯಕ್ರಮಗಳು ಇಲ್ಲದ್ದರಿಂದ ಜನತೆಯನ್ನು ದೀರ್ಘ ಹೋರಾಟಕ್ಕೆ ಮುನ್ನುಗ್ಗುವಂತೆ ಮಾಡುವುದು ಸಾಧ್ಯವಾಗಲಿಲ್ಲ. ಬ್ರಿಟಿಷ್ ಸರಕಾರದ ಮೇಲೆ ಈ ಹೋರಾಟ ಹೇಳಿಕೊಳ್ಳುವಂತ ಪರಿಣಾಮ ಬೀರಲಿಲ್ಲ.

ಆರೋಗ್ಯದ ಕಾರಣದಿಂದ ಗಾಂಧೀಜಿಯವರನ್ನು 1944 ಮೇ 6 ರಂದು ಬಿಡುಗಡೆ ಮಾಡಲಾಯಿತು. ಗಾಂಧೀಜಿಯವರು ಜಿನ್ನಾರೊಡನೆ ಮಾತುಕತೆ ಮಾಡಿದರೂ ಒಂದು ಒಪ್ಪಂದಕ್ಕೆ ಬರಲಾಗಲಿಲ್ಲ. ಮಹಾಯುದ್ಧ ನಡೆಯುತ್ತಿರುವ ಸಮಯದಲ್ಲಿ ಹೋರಾಟ ಪ್ರಾರಂಭವಾಗಿದ್ದರಿಂದ ಸರಕಾರಕ್ಕೆ ಹಿನ್ನಡೆಯಾಗುತ್ತದೆ ಎಂಬ ನಿರೀಕ್ಷೆ ಸುಳ್ಳಾಯಿತು. ಹೋರಾಟ ವಿಫಲವಾಯಿತು. ಏಕೆ? ಘೋಷಣೆಯಲ್ಲಿದ್ದ ಗಡುಸು, ಹೋರಾಟದಲ್ಲಿ ಮೊಳಗಲಿಲ್ಲ. ಅದೊಂದು ಹೊಂದಾಣಿಕೆಯ ಅಥವಾ ಸರಕಾರವನ್ನು ಬೆದರಿಸುವ ಹೋರಾಟವಾಗಿತ್ತು. ಸರಕಾರವನ್ನು ಸಂಪೂರ್ಣ ನಿಷ್ಕ್ರಿಯಗೊಳಿಸುವ ಹೋರಾಟ ಅದಾಗಿರಲಿಲ್ಲ. 1945 ರಲ್ಲಿ ನೆಹರು, ಪಟೇಲ್ ಮತ್ತು ವಲ್ಲಭಬಾಯಿ ಪಂತ್ ಸಹಿಯುಳ್ಳ ಕಾಂಗ್ರೆಸ್ಸಿನ ಪರವಾದ ಹೇಳಿಕೆ ಮೇಲಿನ ಮಾತನ್ನು ಪುಷ್ಟೀಕರಿಸುತ್ತದೆ. 'ಯಾವುದೇ ಚಳುವಳಿ ಎಐಸಿಸಿಯಿಂದಾಗಲಿ ಅಥವಾ ಗಾಂಧೀಜಿಯವರಿಂದಾಗಲೀ ಅಧಿಕೃತವಾಗಿ ಪ್ರಾರಂಭಿಸಲ್ಪಟ್ಟಿಲ್ಲ" ಎಂದು ಆ ಪ್ರಕಟಣೆಯಲ್ಲಿದೆ. ಭಾರತ ಬಿಟ್ಟು ತೊಲಗಿ ಚಳುವಳಿ ವಿಫಲವಾದರೂ ಹೋರಾಟದ ತೀವ್ರತೆಯನ್ನು ಹೆಚ್ಚಿಸಿತು.

**ಭಾರತಕ್ಕೆ ಸ್ವಾತಂತ್ರ್ಯ:** 1942 ರ ನಂತರದ ಬೆಳವಣಿಗೆಗಳು ಭಾರತಕ್ಕೆ ಸ್ವಾತಂತ್ರ್ಯ ಲಭಿಸುವತ್ತ ಭರದಿಂದ ನಡೆದವು. 1943 ಅಕ್ಟೋಬರ್‌ನಲ್ಲಿ ಅಧಿಕಾರ ವಹಿಸಿಕೊಂಡ ಲಾರ್ಡ್ ವೇವೆಲ್ 1945 ಮಾರ್ಚ್‌ನಲ್ಲಿ ಲಂಡನ್‌ಗೆ ತೆರಳಿ ವೈಸರಾಯ ಮಂಡಳಿಗೆ ಭಾರತೀಯರನ್ನು ಆಯ್ಕೆ ಮಾಡುವ ಕುರಿತು ಚರ್ಚಿಸಿದನು ಮತ್ತು ಹಿಂದೂ ಮುಸ್ಲಿಮರನ್ನು ಸಮಾನತೆಯ ಆಧಾರದ ಮೇಲೆ ವೈಸರಾಯ್ ಮಂಡಳಿ



ಆಯ್ಕೆ ಮಾಡಿಕೊಳ್ಳುವ ಸಲಹೆಯೊಂದಿಗೆ ಭಾರತಕ್ಕೆ ಬಂದನು. ಆದರೆ ಕಾಂಗ್ರೆಸ್ ಹಾಗೂ ಲೀಗ್‌ಗಳ ನಡುವೆ ಒಂದು ಒಪ್ಪಂದಕ್ಕೆ ಬರಲಾಗದ್ದರಿಂದ ಇದು ವಿಫಲವಾಯಿತು.

ಬ್ರಿಟನ್ನಿನಲ್ಲಿ ಲೇಬರ್ ಪಕ್ಷ ಅಧಿಕಾರಕ್ಕೆ ಬಂದಿತು. ಭಾರತದ ರಾಜಕೀಯ ಬಿಕ್ಕಟ್ಟನ್ನು ಪರಿಹರಿಸಲು ಮನಸ್ಸು ಮಾಡಿತು. ಬ್ರಿಟಿಷ್ ಪ್ರಧಾನ ಮಂತ್ರಿ ಫೆಬ್ರವರಿ 19, 1946 ರಂದು ಭಾರತದ ಮುಖಂಡರೊಡನೆ ಚರ್ಚಿಸಿ ಭಾರತದಲ್ಲಿ ಸಂಪೂರ್ಣ ಸ್ವರಾಜ್ಯದ ಮನಗಾಣುವಿಕೆಯನ್ನು ಅಭಿವೃದ್ಧಿಗೊಳಿಸಲು ಕ್ಯಾಬಿನೆಟ್ಟಿನ ಮೂವರು ಸದಸ್ಯರ ಭೇಟಿ ನೀಡುವುದಾಗಿ ಪ್ರಕಟಿಸಿದ ಕ್ಯಾಬಿನೆಟ್ ಆಯೋಗ 1946 ರ ಮಾರ್ಚ್ ತಿಂಗಳಲ್ಲಿ ಭಾರತಕ್ಕೆ ಭೇಟಿ ನೀಡಿತು. ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ನೊಡನೆ ಚರ್ಚಿಸಿತು. ಆದರೆ ಕಾಂಗ್ರೆಸ್ ಮತ್ತು ಲೀಗ್ ಮಧ್ಯ ಕಂದಕವಿದ್ದುದರಿಂದ ಒಪ್ಪಂದಕ್ಕೆ ಬರಲಾಗಲಿಲ್ಲ. ಸಂಸ್ಥಾನಗಳೂ ಸೇರಿದಂತೆ ಇಡೀ ಭಾರತಕ್ಕೆ ಒಂದು ಫೆಡರಲ್ ರೀತಿಯ ಸರಕಾರವನ್ನು ಕ್ಯಾಬಿನೆಟ್ ಆಯೋಗ ಶಿಫಾರಸು ಮಾಡಿತು. ವಿವಿಧ ಪಕ್ಷಗಳ ಮುಖಂಡರಿಂದ ಒಳಗೊಂಡು ವೈಸರಾಯ್ ಎಕ್ಸಿಕ್ಯೂಟಿವ್ ಕೌನ್ಸಿಲ್‌ನ ಪುನರ್ರಚನೆಯಿಂದಾದ ತಾತ್ಕಾಲಿಕ ರಾಷ್ಟ್ರೀಯ ಸರಕಾರದ ಸ್ಥಾಪನೆಗೆ ಕ್ಯಾಬಿನೆಟ್ ಆಯೋಗ ಶಿಫಾರಸು ಮಾಡಿತು.

ಈ ಸಮಯದಲ್ಲಿ ಕಾರ್ಷಿಕ ಕ್ರಾಂತಿ ದೇಶದ ಬೇರೆ ಬೇರೆ ಭಾಗಗಳಲ್ಲಿ ಭುಗಿಲೇಳ ಹತ್ತಿತು. ತೇಭಾಗ, ತೆಲಂಗಾಣ, ರೈತ ಹೋರಾಟಗಾರರಿಗೆ ಎಡಪಂಥೀಯ ಚಳುವಳಿ ಬೆಂಬಲ ನೀಡಿತು. ಮುಂಬಯಿ, ಕರಾಚಿ ಮತ್ತು ಮದ್ರಾಸಿನಲ್ಲಿ ಭಾರತ ನೌಕಾದಳ ಹೋರಾಟಕ್ಕಿಳಿಯಿತು. ಇವೆಲ್ಲ ಘಟನೆಗಳು ರಾಷ್ಟ್ರೀಯ ಹೋರಾಟಕ್ಕೆ ನೇತೃತ್ವ ನೀಡಿದ್ದ ಶ್ರೀಮಂತವರ್ಗ ಬೆರಗಾಯಿತು ಹಾಗೂ ತನ್ನ ನಾಯಕತ್ವ ಕೈ ತಪ್ಪುವ ಭಯವುಂಟಾಯಿತು. ಸರದಾರ ಪಟೇಲ್ ಮತ್ತು ಗಾಂಧೀಜಿ ನೌಕಾದಳದ ದಂಗೆ ಖಂಡಿಸಿದರು. ಬ್ರಿಟೀಷ್ ಸಾಮ್ರಾಜ್ಯಶಾಹಿಯನ್ನು ದುರ್ಬಲಗೊಳಿಸುವ ಅಂತರ್‌ರಾಷ್ಟ್ರೀಯ ಬೆಳವಣಿಗೆಯ ಲಾಭ ಪಡೆಯುತ್ತ ಕಾಂಗ್ರೆಸ್ ಜನಸಮೂಹದ ಮೇಲಿನ ತನ್ನ ಹಿಡಿತವನ್ನು ಉಪಯೋಗಿಸಿಕೊಂಡು ಹೋರಾಟ ಕೈ ಮೀರದಂತೆ ನೋಡಿಕೊಂಡಿತು.

ಮುಸ್ಲಿಂ ಲೀಗ್ ಪ್ರತ್ಯೇಕ ರಾಷ್ಟ್ರದ ಬೇಡಿಕೆಗೆ ಅಂಟಿಕೊಂಡಿತು. ಧರ್ಮದ ಹೆಸರಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಹಿಂದೂ-ಮುಸ್ಲಿಮರು ಕೊಲ್ಲಲ್ಪಟ್ಟರು. ಮನೆ, ಮಠ, ಆಸ್ತಿ ಕಳೆದುಕೊಂಡರು.

ಅಂತಿಮವಾಗಿ ಬ್ರಿಟಿಷ್ ಸರಕಾರ ಫೆಬ್ರವರಿ 20 ರಂದು ಭಾರತ ಬಿಟ್ಟು ಹೋಗುವ ತನ್ನ ಇಚ್ಛೆಯನ್ನು ಪ್ರಕಟಿಸುವುದರ ಮೂಲಕ ಬಿಕ್ಕಟ್ಟಿಗೆ ಪರಿಹಾರ ಸೂಚಿಸಿತು. ಭಾರತದ ಎಲ್ಲಾ ಕಡೆಗಳಲ್ಲಿ ಈ ಘೋಷಣೆ ಉತ್ಸಾಹದ ಅಲೆ ಎಬ್ಬಿಸಿತು. ಅಧಿಕಾರ ಹಸ್ತಾಂತರಕ್ಕೆ ಲಾರ್ಡ್ ಮೌಂಟ್ ಬ್ಯಾಟನ್‌ರು ವೈಸರಾಯಾಗಿ ನೇಮಕಗೊಂಡನು. ಲಾರ್ಡ್ ಮೌಂಟ್ ಬ್ಯಾಟನ್ 1947 ಮಾರ್ಚ್ 24 ರಂದು ಅಧಿಕಾರ ಸ್ವೀಕರಿಸಿದನು. ಜೂನ್ 3 ರಂದು ಬ್ರಿಟಿಷರಿಂದ ಭಾರತೀಯರಿಗೆ ಅಧಿಕಾರ ವರ್ಗಾಯಿಸುವ ವಿಧಾನವನ್ನು ಪ್ರಕಟಿಸಿದನು. ಈ ಹೊಸ ನೀತಿಯ ಮುಖ್ಯಾಂಶಗಳೆಂದರೆ -

1. ಮುಸ್ಲಿಂ ಬಹುಮತವಿರುವ ಪ್ರದೇಶಗಳವರು ಅಪೇಕ್ಷಿಸಿದಲ್ಲಿ ಅವರಿಗೆ ಪ್ರತ್ಯೇಕ ಡೊಮಿನಿಯನ್



ಪಡೆಯಲು ಅವಕಾಶ ನೀಡಲಾಗುವುದು ಮತ್ತು ಅದಕ್ಕಾಗಿ ಹೊಸ ಸಂವಿಧಾನ ಸಭೆ ರಚಿಸಲಾಗುವುದು. ಆದರೆ ಹಾಗಾದಲ್ಲಿ ಆ ಪ್ರಾಂತ್ಯದ ಶಾಸಕಾಂಗಗಳು ಹಿಂದೂ ಬಹುಮತವಿರುವ ಜಿಲ್ಲೆಗಳ ಪ್ರತಿನಿಧಿಗಳು ಬಯಸಿದಲ್ಲಿ ಬಂಗಾಳ ಮತ್ತು ಪಂಜಾಬುಗಳ ವಿಭಜನೆಯಾಗುತ್ತದೆ.

2. ವಾಯುವ್ಯ ಗಡಿನಾಡಿನ ಪ್ರಾಂತದವರು ಪಾಕಿಸ್ತಾನವನ್ನು ಸೇರಬೇಕೆ ಬೇಡವೇ ಎಂಬುದರ ಬಗ್ಗೆ ಪ್ರಜಾ ನಿರ್ಧಾರ ತೆಗೆದುಕೊಳ್ಳಲಾಗುವುದು.

3. ಪ್ರಜಾ ನಿರ್ಧಾರದಿಂದ ಜನಾಭಿಪ್ರಾಯ ಖಚಿತಪಡಿಸಿಕೊಂಡ ತರುವಾಯು ಸಿಲ್ಹೆಟ್ ಜಿಲ್ಲೆಯನ್ನು ಬಂಗಾಳದಲ್ಲಿನ ಮುಸ್ಲಿಂ ಜಿಲ್ಲೆಗೆ ಸೇರಿಸಲಾಗುವುದು.

4. ಬಂಗಾಳ ಮತ್ತು ಪಂಜಾಬ್‌ಗಳಲ್ಲಿ ಹಿಂದೂ-ಮುಸ್ಲಿಂ ಪ್ರಾಂತಗಳ ಗಡಿ ನಿರ್ಧರಿಸಲು ಗಡಿ ಆಯೋಗವನ್ನು ರಚಿಸಲಾಗುವುದು.

5. ಪಾರ್ಲಿಮಂಟಿನ ಪ್ರಸಕ್ತ ಅಧಿವೇಶನದಲ್ಲಿ ಭಾರತಕ್ಕೆ ಈ ದಿಸೆಯಲ್ಲಿ ಸಂವಿಧಾನ ಸಭೆಯ ಅಂತಿಮ ನಿರ್ಧಾರಕ್ಕೆ ಯಾವುದೇ ರೀತಿಯ ಕುಂದಾಗದಂತೆ ಡೊಮಿನಿಯನ್ ಸ್ಥಾನ ನೀಡಲು ತಕ್ಷಣ ಮಸೂದೆ ಮಂಡಿಸಲಾಗುವುದು.

ಈ ಯೋಜನೆಯನ್ನು ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗುಗಳು ಒಪ್ಪಿಕೊಂಡವು. ಯಾವುದೇ ಭಿನ್ನಾಭಿಪ್ರಾಯವಿಲ್ಲದೆ 1947 ಜುಲೈ 1 ರಂದು ಭಾರತ ಸ್ವಾತಂತ್ರ್ಯದ ಮಸೂದೆ ಅಂಗೀಕರಿಸಲ್ಪಟ್ಟು ಆಗಸ್ಟ್ 15 ಅಧಿಕಾರ ವರ್ಗಾವಣೆಯ ದಿನ ಎಂದು ನಿರ್ಧರಿಸಿತು. ಅಂತೆಯೆ ಆಗಸ್ಟ್ 15, 1947 ರಂದು ಭಾರತ ಸ್ವತಂತ್ರವಾಯಿತು.

**ಆಧಾರ ಗ್ರಂಥಗಳು**


1. Indian Struggle for Independence - Bipan Chndra and Others
2. An Advanced History of Indian - Dr. R.C.Majumdar and others
3. History of the Freedom Movement in India - Volume II -By R.C.Majumdar.
4. Freedom Struggle-By Bipan Chandra, Amales Tripathi and Barun De-National Book Trust Publication.
5. Modern Indian History- V.D.Mahajan,
6. ಭಾರತ ಸ್ವಾತಂತ್ರ್ಯ ಚಳುವಳಿ - ಶ್ರೀ ಎ.ಪಿ.ಶ್ರೀನಿವಾಸಮೂರ್ತಿ
7. ಭಾರತದ ಚರಿತ್ರೆ (1526-1970) ಡಾ|| ಬಿ.ಮುದ್ದಾಚಾರಿ
8. Indian National Movement - D.C.Gupta




# ಭಾರತದ ರಾಷ್ಟ್ರೀಯ ಚಳುವಳಿ ಗಾಂಧೀಜಿ ನಾಯಕತ್ವ

**ಬಿ.ಎಸ್. ಸೊಪ್ಪಿನ,** ನವಲಗುಂದ

**ಪ್ರಸ್ತಾವನೆ**

ಮಹಾತ್ಮಾ ಗಾಂಧೀಜಿಯವರನ್ನು ಭಾರತ ರಾಷ್ಟ್ರೀಯ ಚಳುವಳಿಯ ಧೃವತಾರೆ ಎಂದು ಬಣ್ಣಿಸಲಾಗುತ್ತಿದೆ. ಭಾರತದ ಎಲ್ಲ ಜನವಿಭಾಗಗಳನ್ನು ಸಂಘಟಿಸಿ, ಅಹಿಂಸಾತ್ಮಕ ಹೋರಾಟದ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಡುವಲ್ಲಿ ಅವರ ಪಾತ್ರ ಹಿರಿದಾಗಿದೆ. ಆದರೆ ಗಾಂಧೀಜಿಯವರು ತಮ್ಮನ್ನು ಕೇವಲ ರಾಜಕೀಯಕ್ಕೆ ಸೀಮಿತಗೊಳಿಸಿಕೊಳ್ಳದೆ ಮಾನವೀಯ ಸಮಾಜದ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸುವಂತೆ, ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ ಮತ್ತು ಬೋಧನೆಗಳನ್ನು ನೀಡಿದ್ದಾರೆ. ಇಂದು ಯಾವುದೆ ವಿಷಯದಲ್ಲಿ ಚರ್ಚೆ, ತುಡಿತ ಹಾಗೂ ಚಿಂತನ ಮಂಥನಗಳು ನಡೆದಾಗ ನಮ್ಮ ಮಧ್ಯ ಗಾಂಧಿ ವಿಚಾರಧಾರೆ ಸಹಜವಾಗಿ ನುಸುಳಿಕೊಂಡು ಬರುತ್ತದೆ. ಅವರ ನುಡಿಯೊಂದನ್ನು ಉಲ್ಲೇಖಿಸದೆ ವಿಚಾರ ಮುಕ್ತಾಯವಾಗುವುದಿಲ್ಲ. ಗಾಂಧೀವಾದ ಎಂಬುದಿಲ್ಲವೆಂದು ಸ್ವತಃ ಗಾಂಧೀಜಿ ತಳ್ಳಿಹಾಕಿದರೂ, ಗಾಂಧೀ ಮಾರ್ಗ, ಗಾಂಧೀವಾದದಂತಹ ಪದಗಳು ಸಮಾಜ ವಿಜ್ಞಾನಿಗಳ, ಸಾಮಾಜಿಕ, ರಾಜಕೀಯ ಕಾರ್ಯಕರ್ತರ ಮಧ್ಯದಲ್ಲಿ ನಿರರ್ಗಳವಾಗಿ ಬಳಕೆಯಲ್ಲಿವೆ. ಪೋರಬಂದರಿನ ಸಂಸ್ಥಾನಿಕನ ದಿವಾನರಾಗಿ ಸೇವೆ ಮಾಡುತ್ತಿದ್ದ ಕುಟುಂಬದಿಂದ ಬಂದ ಗಾಂಧೀಯವರು ದಿವಾನಗಿರಿ ಗುಣಗಳನ್ನೆ ಮೈಗೂಡಿಸಿಕೊಂಡು ಬೆಳೆಯಬಹುದಾಗಿತ್ತು. ಆದರೆ ಬೆಳೆದಂತೆ ಅವರು ಭಿನ್ನರಾದರು. ಗಾಂಧೀಜಯವರ ವ್ಯಕ್ತಿತ್ವ, ಅವರು ರಾಜಕೀಯದಲ್ಲಿ ಅನುಸರಿಸಿದ ಮಾರ್ಗ, ಅವರ ಧೋರಣೆಗಳ ಸಂಪೂರ್ಣ ವಿಮರ್ಶೆ ಇಲ್ಲಿ ಅಸಾಧ್ಯವಾದರೂ, ಅವರ ವ್ಯಕ್ತಿತ್ವದ ಪರಿಚಯ ಕುರಿತು ಸ್ವಲ್ಪವಾದರೂ ಹೇಳದಿದ್ದರೆ ಈ ಪುಟ್ಟ ಲೇಖನ ಪೂರ್ಣವಾದೀತೆಂದು ಅನಿಸದು.

ಗಾಂಧೀಜಿಯವರದು ಬಹು ಸಂಕೀರ್ಣಗೊಂಡ ವ್ಯಕ್ತಿತ್ವ. ಬಾಲ್ಯದಲ್ಲಿ ತಾಯಿಯಿಂದ ದೊರತ ನೀತಿ ಶಿಕ್ಷಣದಿಂದಾಗಿ ಅವರು ಕೆಲವು ಆದರ್ಶಗಳಿಗೆ ಕಟ್ಟುಬೀಳುವಂತಾಯಿತು. ಅವರೊಬ್ಬ ಆದರ್ಶವಾದಿ. ಸತ್ಯ, ಅಹಿಂಸೆ, ಐಹಿಕ ಸುಖದ ತ್ಯಾಗ, ಸರಳ ಜೀವನ ಮುಂತಾದ ನೈತಿಕ ಮೌಲ್ಯಗಳು, ಶಾಂತಿ, ಸ್ವಾತಂತ್ರ್ಯ, ಸಹಬಾಳ್ವೆ, ಪ್ರಜಾಪ್ರಭುತ್ವ, ರಾಮರಾಜ್ಯ ಮುಂತಾದ ರಾಜಕೀಯ ಆದರ್ಶಗಳು, ಹಿಂದೂ-ಮುಸ್ಲಿಂ ಐಕ್ಯತೆ, ಸ್ತ್ರೀ ವಿಮೋಚನೆ, ಧರ್ಮ





ಸಹಿಷ್ಣುತೆಯಂತಹ ಸಾಮಾಜಿಕ ಗುರಿಗಳು ಗಾಂಧೀಜಿಯುವರ ಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಯಾವುದೆ ಪ್ರಗತಿಪರ ಚಳುವಳಿ, ಸಿದ್ಧಾಂತಗಳ ಪ್ರಭಾವಲಯಕ್ಕೆ ಸಿಲುಕಿರದ ಗಾಂಧೀ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟಗಳಿಗೆ ತಮ್ಮನ್ನು ಅರ್ಪಿಸಿಕೊಂಡದ್ದಾದರೂ ಹೇಗೆ? ಮತ್ತೆ ಯಾಕೆ? ಮೇಲೆ ಹೇಳಿದ ಆದರ್ಶಗಳಿಗೆ ಅವರು ಕಟ್ಟುಬಿದ್ದುದ್ದೆ ಅವರು ಇಂಥ ಹೋರಾಟಗಳಿಗೆ ಮುಂದಾಳ್ತನ ನೀಡುವಂತೆ ಮಾಡಿದ್ದು. ವಿದ್ಯಾರ್ಥಿ ಗಾಂಧಿಗೂ ಹಾಗೂ ಬ್ಯಾರಿಸ್ಟರ್ ಗಾಂಧಿಗೂ ಹಾಗೂ ಜನ ನಾಯಕ ಗಾಂಧಿಗೂ ಇರುವ ವ್ಯತ್ಯಾಸವನ್ನು ಗುರುತಿಸಬಹುದು. ಆದರೆ ಆ ಎತ್ತರದ ಮಟ್ಟಕ್ಕೇರಿದ ಗಾಂಧೀಜಿ ತಮ್ಮ ತಾರುಣ್ಯದಲ್ಲಿ ಔನತ್ಯಕ್ಕೇರುವ ಯಾವ ಸೂಚನೆಗಳನ್ನು ತೋರಲಿಲ್ಲ. ಕೆಲವರಿಗೆ ಗಾಂಧೀಜಿ ರಾಜನೀತಜ್ಞರಾಗಿ ಕಂಡರೆ, ಕೆಲವರಿಗೆ ದಾರ್ಶನಿಕರಾಗಿ, ಮತ್ತೆ ಕೆಲವರಿಗೆ ಧರ್ಮ ಸುಧಾರಕರಾಗಿ ಕಾಣುತ್ತಾರೆ.

ಗಾಂಧೀಜಿಯುವರ ಜೀವನ ಘಟನಾವಳಿಗಳನ್ನು ವಿಶ್ಲೇಷಿಸಿದರೆ, ಅವರಿಗೆ ರಾಜಕೀಯದಲ್ಲಿ ಆಸಕ್ತಿ ಇರದಿದ್ದನ್ನು ಗುರುತಿಸಬಹುದು. ಆದರೆ 20ರ ದಶಕದ ನಂತರ ಅವರು ರಾಜಕೀಯದಲ್ಲಿ ಅನಿವಾರ್ಯವಾದರು. ಬ್ರಿಟಿಷರು ಭಾರತ ಗೃಹ ಕೈಗಾರಿಕೆಗಳನ್ನು ವ್ಯವಸ್ಥಿತವಾಗಿ ನಾಶಪಡಿಸಿ ಲಕ್ಷಾಂತರ ಗ್ರಾಮೀಣ ಜನತೆಯನ್ನು ನಿರ್ಗತಿಕರನ್ನಾಗಿ ಮಾಡಿದರು ದಾರಿದ್ರ್ಯದ ಕೂಪಕ್ಕೆ ತಳ್ಳಿದರು ಎಂಬುದಕ್ಕೆ ಎರಡು ಮಾತಿಲ್ಲ ಎಂಬುದನ್ನು ಇತಿಹಾಸದ ಪುಟಗಳಿಂದ ತಿಳಿಯುತ್ತೇವೆ. ಗಾಂಧೀಜಿಯವರು ರಾಷ್ಟ್ರೀಯ ಚಳುವಳಿಗಳಿಗೆ ನಾಯಕತ್ವ ನೀಡಿದ ಸಂದರ್ಭದಲ್ಲಿ ಗೃಹ ಕೈಗಾರಿಕೆಗಳಿಗೆ ಪ್ರಾಧಾನ್ಯತೆ ನೀಡಿದರು. 'ಚರಕ' ಸ್ವಾವಲಂಬನೆಯ ದ್ಯೋತಕವಾಗಿ ಮೂಡಿಬಂದಿತು. ಭಾರತದಲ್ಲಿ ಗ್ರಾಮ ಸ್ವರಾಜ್ಯ ಸೃಷ್ಟಿಸುವುದು ಅವರ ಕನಸಾಗಿತ್ತು.



**ಸಾಮೂಹಿಕ ಚಳುವಳಿಗಳ ನಾಯಕತ್ವ :**

ಗಾಂಧೀಜಿಯವರು 1915ರ ವರೆಗೆ ಅಂದರೆ ದ.ಆಫ್ರಿಕಾದಿಂದ ಭಾರತಕ್ಕೆ ಮರಳಿ ಬರುವವರೆಗೆ ಭಾರತ ರಾಷ್ಟ್ರೀಯ ಚಳುವಳಿಯಲ್ಲಾಗಲಿ, ಭಾರತ ರಾಷ್ಟ್ರೀಯ ಕಾಂಗ್ರಸಿನಲ್ಲಾಗಲಿ ಯಾವುದೆ ಮಹತ್ವದ ಸ್ಥಾನ ಪಡೆದಿರಲಿಲ್ಲ. ಕಾಂಗ್ರೆಸ್ಸಿನ ಸಭೆಗಳಿಗೆ ಮಾತ್ರ ಹಾಜರಾಗುತ್ತಿದ್ದರು. ಆದರೆ ಮುಂದೆ 4 ವರ್ಷಗಳಲ್ಲಿ ರಾಷ್ಟ್ರೀಯ ಚಳುವಳಿಯ ಮುಂಚೂಣಿಯಲ್ಲಿದ್ದುದು ಮಹತ್ವದ ಸಂಗತಿ. ದ.ಆಫ್ರಿಕಾದಲ್ಲಿ ಬಿಳಿಯರ ಆಡಳಿತವು ವರ್ಣಭೇದ ನೀತಿಯನ್ನು ಅನುಸರಿಸಿ ಭಾರತೀಯ ಸಂಜಾತರ ಮೇಲೆ ದೌರ್ಜನ್ಯವೆಸಗುತ್ತಿತ್ತು. ಗಾಂಧೀಜೀ ಇದನ್ನು ಪ್ರತಿಭಟಿಸಿದರು. ಭಾರತೀಯರ ಹಕ್ಕುಗಳ ರಕ್ಷಣೆಗಾಗಿ 'ಸತ್ಯಾಗ್ರಹ' ಪ್ರಾರಂಭಿಸಿ ದರು. ಹೋರಾಟದ ಗುರಿ ತಲುಪುವಲ್ಲಿ ಯಶಸ್ವಿಯಾದರು. ಬ್ರಿಟಿಶ್ ಸಾಮ್ರಾಜ್ಯಶಾಹಿ ವಿರುದ್ಧ ಅವರ ಹೋರಾಟದ ಬೀಜಗಳು ದಕ್ಷಿಣ ಆಫ್ರಿಕಾದಲ್ಲಿ ಮೊಳಕೆಯೊಡೆದವು. ಆ ಹೋರಾಟದ ಮುಂದುವರಿದ ಭಾಗವಾಗಿ ಸಾಮ್ರಾಜ್ಯಶಾಹಿ ವರ್ಣಬೇಧ ನೀತಿ ವಿರೋಧಿ ಚಳುವಳಿಯನ್ನು ನೆಲ್ಸನ್ ಮಂಡೇಲಾ ನೇತೃತ್ವದಲ್ಲಿ ಆಫ್ರಿಕಾದ ಜನತೆ ಇನ್ನು ಮುಂದಕ್ಕೆ ಕೊಂಡೊಯ್ದರು. ಇಂದು ದಕ್ಷಿಣ ಆಫ್ರಿಕಾ ಬಿಳಿಯರ ಆಡಳಿತದಿಂದ ಮುಕ್ತವಾಗಿದೆ. 'ಸತ್ಯಾಗ್ರಹ' ಪರಿಕಲ್ಪನೆಯ ಅನಾಟಮೆ (Anatomy) ಇಲ್ಲಿ ಅಪ್ರಸ್ತುತವಾದರೂ, ಅದೊಂದು ವಿನೂತನ ಹೋರಾಟದ ಮಾರ್ಗ ಎಂಬುದು ಸತ್ಯ. ಇಂಥ ಹೊಸ ಹೋರಾಟದ ಶ್ರೀಮಂತ ಅನುಭವಗಳೊಂದಿಗೆ ಗಾಂಧೀಜಿ ಭಾರತಕ್ಕೆ ಮರಳಿದರು. ದ.ಆಫ್ರಿಕಾದಲ್ಲಿ ಯಶಸ್ವಿಯಾಗಿದ್ದ ಸತ್ಯಾಗ್ರಹ ಭಾರತದಲ್ಲಿ ಯಶಸ್ವಿಯಾಗುತ್ತದೆ ಎಂಬ ಬಲವಾದ ನಂಬಿಕೆ ಅವರದಾಗಿತ್ತು.

ಭಾರತದ ಇತಿಹಾಸದಲ್ಲಿ 1918-19ರ ಅವಧಿಯ ಒಂದು ಮಹತ್ವದ ಬೆಳವಣಿಗೆ ಎಂದರೆ ಕಾರ್ಮಿಕ ಚಳುವಳಿಯ ಪ್ರಾರಂಭ. ಈ ಹಿಂದೆ ಭಾರತದ ಬೇರೆ ಬೇರೆ ಸ್ಥಳಗಳಲ್ಲಿ ಕಾರ್ಮಿಕರು ಸಂಪು ಮಾಡಿದ್ದರು. ಆದರೆ ಸಂಘಟನೆ ಹುಟ್ಟು ಹಾಕುವ ಪ್ರಯತ್ನಗಳಾಗಿರಲಿಲ್ಲ. ಅದಕ್ಕೀಗ ಕಾಲ ಪಕ್ವಗೊಳ್ಳುತ್ತಲಿತ್ತು. 1918ರಲ್ಲಿ ಅಹಮ್ಮದಾಬಾದ್ ಗಿರಣಿ ಕಾರ್ಮಿಕರ ಬೋನಸ್ ಕಡಿತದ ವಿರುದ್ಧ ಸಂಪು ಹೂಡಿದರು. ಗಾಂಧೀಜಿ ಕಾರ್ಮಿಕರ ಬೆಂಬಲಾರ್ಥ ಉಪವಾಸ ಸತ್ಯಾಗ್ರಹ ನಡೆಸಿದರು. ಈ ಹೋರಾಟ ಭಾಗಶಃ ಯಶಸ್ವಿಯಾಯಿತು. ಬೋನಸ್ ಕಡಿತವನ್ನು ಕಡಿಮೆ ಮಾಡಲಾಯಿತು. ಇದರ ಮಹತ್ವದ ಪರಿಣಾಮವೆಂದರೆ 'ಗಾಂಧಿ ಮಾದರಿ'ಯೆಂದು ಕರೆಯಲ್ಪಡುವ ಕಾರ್ಮಿಕ ಸಂಘಟನೆಯೊಂದು ಅಸ್ತಿತ್ವಕ್ಕೆ ಬಂದಿತು. ಅದೇ ಸಮಯಕ್ಕೆ ಮದ್ರಾಸಿನಲ್ಲೂ ವಾಡಿಯಾ ಮತ್ತು ಚಿಕ್ಕರಾಯ ಚಟ್ಟಿಯಾರ ನೇತೃತ್ವದಲ್ಲಿ ಮೇಲಿನ ಸಂಘಟನೆಗೆ ಪರ್ಯಾಯವಾಗಿ ಇನ್ನೊಂದು ಕಾರ್ಮಿಕ ಸಂಘಟನೆ ರೂಪಗೊಂಡಿತು.

ಕಾರ್ಮಿಕರ ಪ್ರಶ್ನೆಗಳನ್ನಷ್ಟೆ ಅಲ್ಲದೆ ರೈತರ ಸಮಸ್ಯೆಗಳಿಗೂ ಗಾಂಧೀಜಿ ಸ್ಪಂದಿಸಿದರು. ರೈತರ ಎರಡು ಹೋರಾಟಗಳಿಗೆ ನಾಯಕತ್ವ ನೀಡಿದ್ದನ್ನು ಅಲ್ಲಿ ಉದಾಹರಿಸಬಹುದು. ಬಿಹಾರ ರಾಜ್ಯದಲ್ಲಿ



ಚಂಪಾರಣ್ಯ ಜಿಲ್ಲೆಯಲ್ಲಿ ರೈತರು ನೀಲಿ ಬೆಳೆದು ಬ್ರಿಟಿಷ್ ಪ್ಲಾಂಟರುಗಳಿಗೆ ಮಾರಾಟ ಮಾಡುತ್ತಿದ್ದರು. ಅಲ್ಲಿನ ರೈತರು ಟಿಂಗಾಥಿಯಾ ವ್ಯವಸ್ಥೆಯ ಪ್ರಕಾರ ತಮ್ಮ ನೆಲದ 3/20ನೆಯ ಭಾಗದಲ್ಲಿ ನೀಲಿ ಬೆಳೆಯಲೇ ಬೇಕೆಂಬ ನಿಯಮವಿತ್ತು. ಅದನ್ನು ಬ್ರಿಟಿಷ್ ಪ್ಲಾಂಟರುಗಳು ನಿಗಧಿಪಡಿಸಿದ ಬೆಲೆಗೆ ಮಾರಬೇಕಿತ್ತು. ರೈತರು ಅತ್ಯಂತ ಕಡಿಮೆ ಪಡೆಯುತ್ತಿದ್ದರು ಮತ್ತು ಪ್ಲಾಂಟರುಗಳ ಸುಲಿಗೆ ಮತ್ತು ದಬ್ಬಾಳಿಕೆಗೆ ಒಳಗಾಗಿದ್ದರು. ಗಾಂಧೀಜಿ ರೈತರ ಸಂಕಷ್ಟಗಳನ್ನು ಕೂಲಂಕುಷವಾಗಿ ವಿಚಾರಣೆ ಮಾಡಿ, ಮಾಹಿತಿ ಸಂಗ್ರಹಿಸಿದರು. ಈ ಸಮಸ್ಯೆಗಳನ್ನು ಸರಕಾರದ ಗಮನಕ್ಕೆ ತಂದರು. ಸರಕಾರ ಒಂದು ವಿಚಾರಣಾ ಸಮಿತಿ ನೇಮಿಸಿತು. ಗಾಂಧೀಜಿಯವರು ಆ ಸಮಿತಿಯ ಸದಸ್ಯರಲ್ಲಿ ಒಬ್ಬರಾಗಿದ್ದರು. ಸರಕಾರ ಈ ಪದ್ಧತಿಯ ನಿರ್ಮೂಲನಕ್ಕೆ ಕ್ರಮಕೈಗೊಂಡಿತು.

ಗುಜರಾತಿನ ಖೈರಾ ಜಿಲ್ಲೆಯಲ್ಲಿ ರೈತರು ಹೆಚ್ಚಿನ ಕಂದಾಯದ ಹೊರೆಯಿಂದ ನರಳುತಿದ್ದರು. 1918ರಲ್ಲಿ ಕ್ಷಾಮ ಉಂಟಾಗಿ ಬೆಲೆ ಬಾರದಿದ್ದಾಗ್ಯೂ ಕಂದಾಯವನ್ನು ಪೂರ್ತಿಯಾಗಿ ನೀಡಬೇಕೆಂದು ಅಧಿಕಾರಿಗಳು ಒತ್ತಾಯಿಸಿದರು. ಗಾಂಧೀಜಿ ಸತ್ಯಾಗ್ರಹಕ್ಕೆ ರೈತರನ್ನು ಪ್ರೇರೇಪಿಸಿದರು. ಯಾವ ಹೆದರಿಕೆಗೂ ಜಗ್ಗದೆ ರೈತರು ಹೋರಾಟಕ್ಕಿಳಿದಾಗ, ಸರಕಾರ ಮಣಿಯಲೇ ಬೇಕಾಯಿತು. ಹೀಗೆ ಗಾಂಧೀಜಿ ಈ ಎಲ್ಲಾ ಸಾಮಾಜಿಕ ಹೋರಾಟಗಳಲ್ಲಿ ಸತ್ಯಾಗ್ರಹವನ್ನು ಪ್ರಯೋಗಿಸಿದರು. ಈ ಹೋರಾಟಗಳ ಜಯಾಪಜಯಗಳು ಏನೇ ಇದ್ದರು ಗಾಂಧೀಜಿಯವರಿಗೆ ಅಖಿಲ ಭಾರತ ಮಟ್ಟದ ನಾಯಕತ್ವದ ಖ್ಯಾತಿಯನ್ನು ತಂದುಕೊಡುವಲ್ಲಿ ಮತ್ತು ಜನಸಾಮಾನ್ಯರ ಮಧ್ಯದಲ್ಲಿ ಅವರನ್ನು ಜನಪ್ರಿಯಗೊಳಿಸುವಲ್ಲಿ ಈ ಹೋರಾಟಗಳು ಸಫಲವಾದವು.

**ರಾಷ್ಟ್ರೀಯ ಚಳುವಳಿಯಲ್ಲಿ ಗಾಂಧೀಜಿ ಪ್ರವೇಶ :**

ಗಾಂಧೀಜಿ ರಾಷ್ಟ್ರೀಯ ಚಳುವಳಿ ಪ್ರವೇಶಿಸುವ ಪೂರ್ವದಲ್ಲಿ, ಚಳುವಳಿ ನಗರವಾಸಿಗಳಿಗೆ, ಶ್ರೀಮಂತ ಹಾಗೂ ಮಧ್ಯಮ ವರ್ಗದ ಸುಶಿಕ್ಷಿತರಿಗೆ ಸೀಮಿತಗೊಂಡಿತ್ತು. ಹಳ್ಳಿಗರ ಪಾತ್ರ ಇದರಲ್ಲಿ ಗೌಣವಾಗಿತ್ತು. ಬಹುಶಃ ಆಗಿನ ನಾಯಕರು ಶ್ರೀಸಾಮಾನ್ಯನನ್ನು ಚಳುವಳಿಯ ಪರಿಧಿಯೊಳಗೆ ತರಲು ಮನಸ್ಸೆ ಮಾಡಿರಲಿಲ್ಲವೋ ಅಥವಾ ಅವರ ಪಾಲ್ಗೊಳ್ಳುವಿಕೆಯ ಅಗತ್ಯತೆಯನ್ನು ಮನಗಂಡಿರಲಿಲ್ಲವೋ ತಿಳಿಯದು. ತಿಲಕರು ಕಾರ್ಮಿಕರ, ದುಡಿಯುವವರ ಪ್ರಶ್ನೆ ಬಂದಾಗಲೆಲ್ಲ ಅವರ ಪರವಾಗಿ ನಿಂತು ಅವರ ಹಿತಾಸಕ್ತಿ ಕಾಪಾಡಲು ಪ್ರಯತ್ನಿಸುತ್ತಿದ್ದರು. ಆದರೆ ಅವರ ಪ್ರಭಾವ ಮಹಾರಾಷ್ಟ್ರ ಪ್ರದೇಶದಲ್ಲಿ ಮಾತ್ರ ಹೆಚ್ಚಿತ್ತು. ಕಾಂಗ್ರೆಸ್ಸಿನ ಮಂದಗಾಮಿ ಹಾಗೂ ಉಗ್ರಗಾಮಿಗಳ ಬಗ್ಗೆ ಜನತೆ ಕ್ರಮೇಣ ಭ್ರಮನಿರಸಗೊಳ್ಳಹತ್ತಿದರು. ಗಾಂಧೀಜಿ ದ.ಆಫ್ರಿಕೆಯಿಂದ ಭಾರತಕ್ಕೆ ಬಂದಾಗ ಜನಸಾಮಾನ್ಯರಿಗೆ ಅವರ ಪರಿಚಯವೇ ಇರಲಿಲ್ಲ. ಜವಹರಲಾಲ ನೆಹರೂನಂತಹವರಿಗೂ ಅವರು ದೂರದ ವ್ಯಕ್ತಿಯಾಗಿದ್ದರು. ಅವರು ಕಾರ್ಮಿಕರ ಹಾಗೂ ರೈತರ ಪರವಾಗಿ ನಡೆಸಿದ ಹೋರಾಟಗಳು ಜನತೆಯನ್ನು ಆಕರ್ಷಿಸಿದವು. ಯುವ ವಕೀಲ ಸರದಾರ ವಲ್ಲಭಬಾಯಿ ಪಟೇಲ್,



ರಾಜೇಂದ್ರ ಪ್ರಸಾದ, ಮಜರ.ಎಲ್.ಹರ್, ಮಹದೇವ ದೇಸಾಯಿ, ಜೆ.ಬಿ. ಕೃಪಲಾನಿರಂಥವರ ಮೇಲೆ ಗಾಂಧೀಜಿಯುವರ ಪ್ರಭಾವ ಅಪಾರವಾಗಿತ್ತು ಮತ್ತು ಅವರ ಹೋರಾಟಗಳಲ್ಲಿ ಪಾಲ್ಗೊಂಡಿದ್ದರು. ದ.ಆಫ್ರಿಕಾ ಹಾಗೂ ಭಾರತದಲ್ಲಿ ಅವರು ನಡೆಸಿದ ಹೋರಾಟಗಳು, ಅವರ ಸಂಘಟನಾ ಸಾಮಾರ್ಥ್ಯಗಳ ಕುರಿತು ಕಾಂಗ್ರೆಸ್ ವರಿಷ್ಠರಿಗೆ ಅವರ ಬಗ್ಗೆ ಉನ್ನತ ಗೌರವ ಇತ್ತು. ಗಾಂಧೀಜಿಯ ಸರಳ ವ್ಯಕ್ತಿತ್ವ. ನೀತಿಬೋಧಕ ಮಾತುಗಳು, ಮಾತೃಭಾಷೆಯಲ್ಲಂತೂ ಅವರ ಸಂಭಾಷಣೆ ಜನ ಸಾಮಾನ್ಯರಿಗೆ ಹಿಡಿಸಿದವು. ಅವರು ಜನಸಾಮಾನ್ಯರ, ದುರ್ಬಲ ಹಾಗೂ ತುಳಿತಕ್ಕೊಳಗಾದವರ ಆಶಾಕಿರಣವಾಗಿ ಹೊರಹೊಮ್ಮಿದ್ದರು.

ಗೋಪಾಲಕೃಷ್ಣ ಗೋಖಲೆ-ತಿಳಕರ ಪ್ರತಿಸ್ಪರ್ಧಿ ಗಾಂಧೀಜಿಯ ರಾಜಕೀಯ ಗುರು ಆಗಿದ್ದರು. ನಂತರದ ದಿನಗಳಲ್ಲಿ ಗಾಂಧೀಜೀ ಗೋಖಲೆ ಹಾಗೂ ತಿಲಕರಿಗಿಂತ ಭಿನ್ನವಾದ ಮಾರ್ಗದಲ್ಲಿ ಮುನ್ನಡೆದು, ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯನ್ನು ಇನ್ನು ಮುಂದಕ್ಕೆ ಕೊಂಡಯ್ದುದ್ದು ಬಹಳ ಕೌತುಕದ ಕಥೆಯಾಗಿದೆ. ಗಾಂಧೀಜಿ ರಾಷ್ಟ್ರೀಯ ಚಳುವಳಿಯಲ್ಲಿ ಪ್ರವೇಶಿಸುವ ಪೂರ್ವದಲ್ಲಿ ಲೋಕಮಾನ್ಯ ಬಾಲಗಂಗಧಾರ ತಿಲಕರು ಕಾಂಗ್ರೆಸ್ಸಿನ ಅದ್ವಿತೀಯ ನಾಯಕರಾಗಿದ್ದರು. ಅವರೊಬ್ಬ ಉಗ್ರವಾದಿ ಗುಂಪಿನ ಮುಖಂಡರಾಗಿದ್ದು, ರಾಷ್ಟ್ರೀಯವಾದಿಯಾಗಿದ್ದರು. ಸ್ವರಾಜ್ಯ ತತ್ವದ ಹರಿಕಾರರಾದ ಅವರು ಅಗಾಧ ಪಂಡಿತರು ಆಗಿದ್ದರು. ತಿಲಕ ಮತ್ತು ಗಾಂಧೀಜಿ ಧೋರಣೆಗಳಲ್ಲಿ ಉಂಟಾದ ಮಹತ್ವದ ಪರಿವರ್ತನೆಯನ್ನು ಇಲ್ಲಿ ಪ್ರಸ್ತಾಪಿಸುವುದು ಅಗತ್ಯ. ತಿಲಕರು ಬ್ರಿಟಿಷ್ ಸರಕಾರದ ವಿರುದ್ಧ ಅಸಹಕಾರ ಹಾಗೂ ಬಹಿಷ್ಕಾರ ಚಳುವಳಿಗಳ ಮೂಲಕ ಸಮರವನ್ನೇ ಸಾರಿದ್ದರು. ಆದರೆ ಕ್ರಮೇಣ ಸರಕಾರದೊಂದಿಗೆ ಕೆಲವು ಸಂದರ್ಭಗಳಲ್ಲಿ ಸಹಕಾರ ನೀಡುವ ಅಗತ್ಯತೆಯನ್ನು ಪ್ರತಿಪಾದಿಸಿದರು. ಅದರಂತೆ ಗಾಂಧೀಜಿ ಕೂಡ ಪ್ರಾರಂಭದಲ್ಲಿ ಬ್ರಿಟಿಷ್ ಸರಕಾರಕ್ಕೆ ಸಾಕಷ್ಟು ನೆರವು ನೀಡಿದರು. ಬೋಯರ್ ಯುದ್ಧದಲ್ಲಿ ಬ್ರಿಟಿಷ್ ಸೈನ್ಯಕ್ಕೆ ಜನರನ್ನು ನೇಮಕ ಮಾಡುವಲ್ಲಿ ಸಹಾಯ ಮಾಡಿದರು. ಅದೇ ಗಾಂಧೀ 20ರ ದಶಕದಲ್ಲಿ ಬ್ರಿಟಿಷ್ ಸರಕಾರಕ್ಕೆ ಸೆಡ್ಡು ಹೊಡೆದು ನಿಂತು, ಅಸಹಕಾರ ಚಳುವಳಿಯನ್ನು ಸಂಘಟಿಸಿದರು.

1919ರಲ್ಲಿ ಜರುಗಿದ ಅಮೃತಸರ ಕಾಂಗ್ರೆಸ್ ಅಧಿವೇಶನ ಒಂದು ಚರಿತ್ರಾರ್ಹ ಘಟನೆಯಾಗಿದೆ. ಇಲ್ಲಿಗೆ ತಿಲಕ ಯುಗದ ಅಂತ್ಯವಾಗಿ ಗಾಂಧೀ ಯುಗದ ಉದಯವನ್ನು ಕಂಡಿದೆ. ಬಾಲಗಂಗಾಧರ ತಿಲಕರು ಹಾಜರಾಗಿದ್ದ ಕೊನೆಯ ಅಧಿವೇಶನ ಇದಾಗಿದೆ. (ಮುಂದೆ ಮೂರು ತಿಂಗಳಲ್ಲಿ ಅವರು ಕೊನೆಯುಸಿರೆಳೆದರು) ಸುಮಾರು 3 ದಶಕಗಳು ಭಾರತದ ರಾಜಕೀಯದಲ್ಲಿ ಪ್ರಭಾವಿ ನಾಯಕರಾಗಿ ಮೆರೆದ ತಿಲಕರಿಗೆ ತಮ್ಮನ್ನು ಹಿಂದಿನ ಸಾಲಿಗೆ ತಳ್ಳಲಾಗುತ್ತಿರುವ ಅನುಭವ ಆಗಿತ್ತು. ಹೊಸ ನಾಯಕತ್ವ ರೂಪಗೊಳ್ಳುತ್ತಿರುವುದನ್ನು ಅವರು ಮನಗೊಂಡಿದ್ದರು. ತಿಲಕರು ಯುವ ಪತ್ರಕರ್ತ ದುರ್ಗಾದಾಸ್‌ರೊಂದಿಗೆ ಮಾತನಾಡುತ್ತಾ ಹೀಗೆ ಹೇಳಿದರು "ನಾನು ಸ್ವರಾಜ್ಯ ನೋಡಲು



ಬದಕುಳಿಯಲಾಗುತ್ತಿಲ್ಲ. ಆದರೆ ನಮ್ಮ ಮುಂದಿನ ಪೀಳಿಗೆ ಪರಿಶ್ರಮ ಪಟ್ಟಲ್ಲಿ ಹಾಗೂ ವಿವೇಚನೆಯಿಂದ ಕಾರ್ಯ ಮಾಡಿದಲ್ಲಿ ಯಶ ಖಂಡಿತ. ಪಂಜಾಬ್ ಗಲಭೆಗಳು ಮತ್ತು ಜಲಿಯನ್‌ವಾಲಾಬಾಗ್ ಹತ್ಯಾಕಾಂಡದಂಥ ಘಟನೆಗಳು ಸರ್ ಶಂಕರ ನಾಯಕ ಹಾಗೂ ರವೀಂದ್ರನಾಥ್ ಟಾಗೋರರಂಥ ಮಹಾನ್ ವ್ಯಕ್ತಿಗಳು ತಮ್ಮ ಗೌರವ ಪದವಿಗಳನ್ನು ಹಿಂದಿರುಗಿಸಿ ರಾಜಕೀಯ ವಾತಾವರಣಕ್ಕೆ ಬಂಡಾಯದ ಕಳೆ ನೀಡಿದರು. ಗಾಂಧೀಜಿ ಈ ಬಂಡಾಯದ ಸಂಕೇತವಾಗಿ ರೂಪಗೊಂಡಿದ್ದಾರೆ. ಕರಾರುವಾಕ್ಕಾದ ಸಹಕಾರ ಹೆಚ್ಚಿನ ಫಲ ನೀಡಿತೆಂಬ ನಂಬಿಕೆ ನನ್ನದಾದರೂ ನಾನು ಅವರ(ಗಾಂಧೀಜಿ) ದಾರಿಗೆ ಅಡ್ಡ ಬರಲಾರೆ" ತಿಲಕ ಮತ್ತು ಗಾಂಧೀಜಿ ಅವರ ಸಾಮರ್ಥ್ಯ, ಆಲೋಚನೆ, ಕಾರ್ಯವಿಧಾನಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿದ್ದರೂ ಅವರಿಬ್ಬರಲ್ಲಿ ಒಂದು ಸಮಾನ ಅಂಶವಿದೆ. ಅವರಿಬ್ಬರು ತಮ್ಮ ಸುತ್ತಿಲಿನ ಜನರ ಭಾವನೆಗಳಿಗೆ ಸ್ಪಂಧಿಸಿ, ಅವರ ಅಗತ್ಯತೆಗಳನ್ನು ಅರ್ಥಮಾಡಿಕೊಂಡು ತಮ್ಮ ಗುರಿ ತಲುಪಲು ಅನುಸರಿಸುವ ಮಾರ್ಗವನ್ನು ಸ್ಪಷ್ಟಪಡಿಸುತ್ತಾ ಸಂಘಟನೆ ಬಲಪಡಿಸುವಲ್ಲಿ ನಿಸ್ಸೀಮರಾಗಿದ್ದರು.

1914ರಲ್ಲಿ ಪ್ರಾರಂಭವಾದ ಮೊದಲ ಜಾಗತಿಕ ಯುದ್ದದಲ್ಲಿ ಬ್ರಿಟಿಷ್ ಸರಕಾರ ಭಾರತವನ್ನು ಭಾಗಸ್ಥ ದೇಶವನ್ನಾಗಿ ಮಾಡಿತ್ತು. ಭಾರತದ ಸಂಪತ್ತು ಹಾಗೂ ಸೈನ್ಯ ಈ ಯುದ್ಧದಲ್ಲಿ ಬಳಕೆಯಾಗಿತ್ತು. ಆದರೆ ಭಾರತೀಯರ ಒಪ್ಪಗೆಯನ್ನು ನೇಪಥ್ಯಕ್ಕಾದರೂ ಪಡೆಯದೇ ಭಾರತವನ್ನು ಯುದ್ಧದಲ್ಲಿ ಭಾಗಿಯನ್ನಾಗಿ ಮಾಡುವುದರ ಮೂಲಕ ತನ್ನ ನಿರಂಕುಶ ಪ್ರಭುತ್ವದ ಗುಣವನ್ನು ಪ್ರಕಟಿಸಿತ್ತು. ಯುದ್ಧದ ಪರಿಣಾಮವಾಗಿ ಉಂಟಾದ ಬೆಲೆ ಏರಿಕೆ ಭಾರತದ ಕಾರ್ಮಿಕರು, ರೈತರು ಮತ್ತು ಸಾಮಾನ್ಯ ಜನತೆಯನ್ನು ಕಷ್ಟಕ್ಕೆ ಗುರಿಪಡಿಸಿತು. ಬ್ರಿಟಿಷ್ ಸಾಮ್ರಾಜ್ಯಶಾಹಿ ಹಾಗ ಭಾರತದ ಜನತೆಯ ನಡುವಿನ ವೈರುದ್ಯವು ತೀವ್ರಗೊಂಡಿತು. ಭಾರತೀಯ ಬಂಡವಾಳಗಾರರಲ್ಲಿ ಕೆಲವು ವಿಭಾಗಗಳು ಹೊಸ ಕೈಗಾರಿಕೆಗಳನ್ನು ಸ್ಥಾಪಿಸಿ ಹೆಚ್ಚಿನ ಲಾಭ ಗಳಿಸಿದವು. ಆದಾಗ್ಯೂ ಭಾರತೀಯ ಬಂಡವಾಳಗಾರರು ಹೆಚ್ಚಿಚ್ಚು ಹಕ್ಕುಗಳಿಗಾಗಿ ಅಪೇಕ್ಷಿಸುತ್ತಿದ್ದುದರಿಂದ ಅವರ ಮತ್ತು ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ನಡುವಿನ ವೈರುದ್ಯವೂ ಹೆಚ್ಚುತ್ತಾ ಹೋಯಿತು. ಯುದ್ಧೋತ್ತರ ದಿನಗಳಲ್ಲಿ ಬ್ರಿಟಿಷ್ ವಿರೋಧಿ ಹೋರಾಟಗಳು ತೀವ್ರಗೊಳ್ಳಲು ಈ ವೆರುದ್ಯಗಳೇ ಪ್ರಚೋದನಕಾರಿ ಅಂಶಗಳು.

ಪ್ರಪಂಚದ ಮೊದಲ ಯುದ್ಧದ ಬಗ್ಗೆ ನಮ್ಮ ರಾಷ್ಟ್ರೀಯ ಚಳುವಳಿಗಳ ನಾಯಕರು ದೋರಣೆ ಏನು? ವಿಚಿತ್ರವೆಂದರೆ ನಮ್ಮ ರಾಷ್ಟ್ರೀಯ ಚಳುವಳಿಯ ನಾಯಕರು ಯುದ್ಧದಲ್ಲಿ ಸರಕಾರಕ್ಕೆ ಸಹಾಯ ಸಹಕಾರದ ಅಭಯ ಹಸ್ತ ನೀಡಲು ಮುಂದಾದರು. ಇದು ರಾಷ್ಟ್ರೀಯ ಚಳುವಳಿಯ ಮುಂದಾಳುಗಳು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಲ್ಲಿ ಆದ ವೈಫಲ್ಯವನ್ನು ಎತ್ತಿ ತೋರಿಸುತ್ತದೆ. ತಿಲಕರು 'ಮರಾಠ' ಪತ್ರಿಕೆಯ ಸೆ. 21, 1914ರ ಸಂಚಿಕೆಯಲ್ಲಿ ಬರೆದರು "ಪ್ರತಿಯೊಬ್ಬ ಭಾರತೀಯನು ತನ್ನನ್ನು ಆಳುತ್ತಿರುವ ಸರಕಾರಕ್ಕೆ ಶಕ್ತಿ ಮೀರಿ ಮನಪೂರ್ವಕ



ಸೇವೆ ಸಲ್ಲಿಸಬೇಕಾದದು ಆತನ ಕರ್ತವ್ಯವಾಗಿದೆ ಎಂದು ನಾನು ಅಭಿಪ್ರಾಯ ಪಡುತ್ತೇನೆ".

ಬ್ರಿಟಿಷರಿಗೆ ಸಹಾಯ ನೀಡುವಲ್ಲಿ ಗಾಂಧೀಜಿ ಏನೂ ಹಿಂದೆ ಬೀಳಲಿಲ್ಲ. ತಮ್ಮ ಸೇವೆಯನ್ನು ಬೇರಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವಂತೆ ಸರಕಾರಕ್ಕೆ ಪತ್ರ ಬರೆದು ತಿಳಿಸಿದರು. ಅಷ್ಟೇ ಅಲ್ಲ ಭಾರತದ ಯುವಕರು ಹಾಗೂ ರೈತರು ಸೈನ್ಯಕ್ಕೆ ಸೇರುವಂತೆ ಪ್ರೋತ್ಸಾಹಿಸಿದರು. ಸೈನ್ಯಕ್ಕೆ ಜನರನ್ನು ಸೇರಿಸುವ ಕ್ರಮವನ್ನು ಗಾಂಧೀಜಿ ಹೀಗೆ ಸಮರ್ಥಿಸಿದರು. "ಸ್ವರಾಜ್ಯ ಪಡೆಯುವ ಸರಳ ಮತ್ತುನೇರ ದಾರಿ ಎಂದರೆ ಸಾಮ್ರಾಜ್ಯ(ಬ್ರಿಟಿಶ್) ರಕ್ಷಣೆಯಲ್ಲಿ ಪಾಲ್ಗೊಳ್ಳುವುದು. ಒಂದು ವೇಳೆ ಸಾಮ್ರಾಜ್ಯ ಹಾಳಾದರೆ ಅದರೊಂದಿಗೆ ನಾವು ನಂಬಿಕೊಂಡಿರುವ ಆಶೆ ಅಕಾಂಕ್ಷೆಗಳು ಹಾಳಾಗುತ್ತವೆ. ಕೆಲವರು ಹೇಳಬಹುದು ಏನೆಂದರೆ ಈಗ ನಮ್ಮ ಹಕ್ಕುಗಳನ್ನು ಪಡೆಯದಿದ್ದರೆ ನಂತರ ಮೋಸಕ್ಕೆ ಒಳಪಡುತ್ತೇವೆ. ಸಾಮ್ರಾಜ್ಯ ರಕ್ಷಣೆಯಲ್ಲಿರುವ ಶಕ್ತಿಯೇ ನಿಜವಾಗಿ ಆ ಹಕ್ಕುಗಳನ್ನು ಪಡೆಯಲು ನೆರವಾಗುತ್ತದೆ"

ಯುದ್ಧದ ನಂತರ ಭಾರತಕ್ಕೆ ಜವಾಬುದಾರಿ ಸರಕಾರ ನೀಡಿದ ಭರವಸೆಯ ಪೊಳ್ಳುತನವನ್ನು ರಾಷ್ಟ್ರೀಯ ಮುಂದಾಳುಗಳು ನಂತರ ಮನಗಂಡರು.

ಯುದ್ಧದ ನಂತರ ಸರಕಾರ ಇಬ್ಬಗೆಯ ನೀತಿಯನ್ನು ಅನುಸರಿಸಿತು. ಒಂದು ಕಡೆಗೆ ಸುಧಾರಣೆಗಳನ್ನು ಘೋಷಿಸುತ್ತಾ ಇನ್ನೊಂದು ಕಡೆಗೆ ದೇಶದಲ್ಲಿ ಗಟ್ಟಿಗೊಳ್ಳುತ್ತಿದ್ದ ಹಾಗೂ ವ್ಯಾಪಕವಾಗುತ್ತಿದ್ದ ಚಳುವಳಿಯನ್ನು ದಮನ ಮಾಡುವುದು ಸರಕಾರದ ಸಂಕಲ್ಪವಾಗಿತ್ತು. ಸರಕಾರ ಮಾಂಟೆಗೋ ಚೆಮ್ಸ್‌ಫರ್ಡನ ಸುಧಾರಣೆಗಳನ್ನು ಪ್ರಕಟಿಸಿತು. ಸುಧಾರಣೆಗಳು ಹಂತ ಹಂತವಾಗಿ ಜಾರಿಗೊಳ್ಳುವಂತೆ ಕ್ರಮ ಕೈಗೊಂಡಿತು. ಭಾರತೀಯರು ಸರಕಾರಕ್ಕೆ ತೋರುವ ಸಹಕಾರದ ಪ್ರಮಾಣದ ಆಧಾರದ ಮೇಲಿಂದ ಅವರನ್ನು ಆಡಳಿತದೊಳಗೆ ಪಾಲ್ಗೊಳ್ಳುವಂತೆ ಮಾಡುವುದು ಸರಕಾರದ ಯೋಜನೆಯಾಗಿತ್ತು. ಒಟ್ಟಾರೆ ಸುಧಾರಣೆಗಳು ನಿರಾಶದಾಯಕವಾಗಿದ್ದವು. ಆದರೂ ಮಿತಗಾಮಿಗಳು ಈ ಸುಧಾರಣೆಗಳನ್ನು ಸ್ವಾಗತಿಸಿದರೆ, ಉಗ್ರಗಾಮಿಗಳು ಪ್ರತಿಕ್ರಿಯೆ ಇದಕ್ಕೆ ವ್ಯತಿರಿಕ್ತವಾಗಿತ್ತು.

ಅದೇ ಸಮಯುದಲ್ಲಿ ದೇಶಾದ್ಯಂತ ಭುಗಿಲೇಳುತ್ತಿದ್ದ ಕ್ರಾಂತಿಕಾರಿ ಚಟುವಟಿಕೆಗಳನ್ನು ನಿರ್ದಯವಾಗಿ ಹತ್ತಿಕ್ಕಲು ಸೂಕ್ತ ಕಾನೂನು ತರಲು ಯೋಚಿಸಿತ್ತು. ಮಾಂಟೆಗೋ ಚೆಮ್ಸ್‌ಫೆರ್ಡ್ ಸುಧಾರಣೆಗಳನ್ನು ಪಾರ್ಲಿಮೆಂಟಿನಲ್ಲಿ ಪ್ರಕಟಿಸಿದ ಕೆಲವೆ ತಿಂಗಳಲ್ಲಿ ವೈಸರಾಯ್ ಚೆಮ್ಸ್‌ಫೆರ್ಡ ಡಿಸೆಂಬರ್ 1917ರಲ್ಲಿ ನ್ಯಾಯಾಧೀಶ ರೌಲೆಟ್ ನೈತೃತ್ವದಲ್ಲಿ ಒಂದು ಸಮಿತಿ ನೇಮಕ ಮಾಡಿದನು. ಈ ಸಮಿತಿಯ ಉದ್ದೇಶ ಸರಕಾರದ ವಿರುದ್ಧ ನಡೆಯಬಹುದಾಗಿದ್ದ ಒಳ ಸಂಚು ಮತ್ತು ಪಿತೂರಿಗಳನ್ನು ಬಯಲು ಮಾಡುವುದು ಅಂತಹ ಒಳ ಸಂಚಿನ ಹುಟ್ಟಡಗಿಸಲು ಸೂಕ್ತ ಕಾನೂನಿಗೆ ಸಲಹೆ ನೀಡುವದೇ ಆಗಿತ್ತು.

ರೌಲೆಟ್ಟಿನ ಅಧ್ಯಕ್ಷತೆಯಲ್ಲಿ ರಚಿತಗೊಂಡ ಸಮಿತಿಯಲ್ಲಿ ಇಬ್ಬರು ಇಂಗ್ಲೀಷರು ಹಾಗೂ ಇಬ್ಬರು



ಭಾರತೀಯರು ಸದಸ್ಯರಿದ್ದರು. ಇದರ ಕಾರ್ಯ ಸಂಪೂರ್ಣ ರಹಸ್ಯವಾಗಿತ್ತು. ಈ ಸಮಿತಿ ಜನರ ಅಹವಾಲು-ಅಭಿಪ್ರಾಯ ಕೇಳುವ ಗೋಜಿಗೆ ಹೋಗಲಿಲ್ಲ. ರೌಲೆಟ್ ಸಮಿತಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತು. ಈ ವರದಿಯ ಆಧಾರದ ಮೇಲಿಂದ ಸರಕಾರ 'ರೌಲೆಟ್ ಶಾಸನ'ವೆಂದು ಚರಿತ್ರೆಯ ಪ್ರಸಿದ್ಧಿ ಪಡೆದ ಮಸೂದೆಯನ್ನು ಪಾಸು ಮಾಡಿತು. ಸರಕಾರಕ್ಕೆ ಅಪಾಯವನ್ನುಂಟು ಮಾಡಬಹುದೆಂದು ಶಂಕಿಸುವ ವ್ಯಕ್ತಿಗಳನ್ನು ಮೂನ್ಸೂಚನೆ ನೀಡದೆ ಬಂಧಿಸುವುದು, ವಿಚಾರಣೆ ಇಲ್ಲದೆ ಸ್ಥಾನ ಬದ್ಧತೆಯಲ್ಲಿಡುವುದು, ಚಳುವಳಿಗಾರರ ಮನೆಗಳನ್ನು ಜಡತಿ ಮಾಡುವುದು ಮುಂತಾದವುಗಳು ಮಸೂದೆಯ ಮುಖ್ಯಾಂಶಗಳು. ಇದೊಂದು ಕರಾಳ ಶಾಸನವಾಗಿತ್ತು. ಇದು ಗಾಂಧೀಜಿಯವರ ಕಣ್ಣು ತೆರೆಯಿಸಿತು. ಅವರು ಹೇಳಿದರು. "ಈ ಸೂಚನೆಗಳು ನಾಗರಿಕ ಸೇವೆ ನಮ್ಮ ಕುತ್ತಿಗೆಯು ಮೇಲೆ ಇಟ್ಟುಕೊಂಡಿರುವ ತನ್ನ ಹಿಡಿತವನ್ನು ಉಳಿಸಿಕೊಳ್ಳುವದರ ಪ್ರದರ್ಶನವಾಗಿದೆ. ಈ ಮಸೂದೆ ನಮ್ಮೆದರು ಒಡ್ಡಿರುವ ಸವಾಲು ಎಂಬುದು ನನ್ನ ಭಾವನೆ". ಮೊದಲನೆ ಜಾಗತಿಕ ಯುದ್ಧದಲ್ಲಿ ಸರಕಾರಕ್ಕೆ ಸ್ಪರ್ಧೆಯೋಪಾದಿಯಲ್ಲಿ ಸಹಾಯ ಮಾಡಿದ್ದ ಮತ್ತು ಮಾಂಟೆಗೋ ಚೆಮ್ಸ್ ಫರ್ಡ್ ಸುಧಾರಣೆಗಳನ್ನು ಮುಕ್ತ ಕಂಠದಿಂದ ಹೊಗಳಿ ಸ್ವಾಗತಿಸಿದ್ದ ರಾಷ್ಟ್ರೀಯ ಚಳುವಳಿಯ ಮುಂದಾಳುಗಳಿಗೆ ಎಂಥ ಬಳುವಳಿ?

ರೌಲೆಟ್ ಮಸೂದೆ ಭಾರತದ ಎಲ್ಲಾ ಜನ ವಿಭಾಗಗಳನ್ನು ಕೆರಳಿಸಿತು. ನಾನಾ ಕಡೆಗಳಲ್ಲಿ ಸಭೆಗಳು, ಪ್ರತಿಭಟನೆಗಳು ನಡೆದವು. ಮಸೂದೆಯ ರದ್ದತಿಗೆ ಸರಕಾರವನ್ನು ಒತ್ತಾಯಿಸಿದವು. ಕೇಂದ್ರ ಶಾಸನ ಮಂಡಳಿಯ ಎಲ್ಲಾ ಅಧಿಕಾರೇತರ ಭಾರತೀಯ ಸದಸ್ಯರು ಮಸೂದೆಯನ್ನು ವಿರೋಧಿಸಿದರಲ್ಲದೆ 4 ಜನ ಸದಸ್ಯರು ಪ್ರತಿಭಟಿಸಿ ರಾಜಿನಾಮೆ ಇತ್ತರು. ಆದರೆ ಸರಕಾರ ಇದಾವುದನ್ನು ಲೆಕ್ಕಿಸಲಿಲ್ಲ. ಅಧಿಕಾರಿ ಸದಸ್ಯರ ನೆರವಿನೊಂದಿಗೆ ಮಾರ್ಚ್ 18, 1919ರಂದು ಮಸೂದೆ ಸ್ವೀಕೃತವಾಯಿತು ಮತ್ತು ಮಾರ್ಚ್ 21, 1919 ರಂದು ಜಾರಿಗೆ ಬಂದಿತು.

ಗಾಂಧೀಜಿಯವರು ರೌಲೆಟ್ ಮಸೂದೆ ವಿರೋಧಿಸಿ ಸತ್ಯಾಗ್ರಹ ಚಳುವಳಿ ಪ್ರಾರಂಭಿಸುವುದರ ಮೂಲಕ ಅಖಿಲ ಭಾರತ ಮಟ್ಟದಲ್ಲಿ ರಾಜಕೀಯುವನ್ನು ಪ್ರವೇಶಿಸಿದರು. ಮೊದಲು ವೈಸ್‌ರಾಯನಿಗೆ ಒಂದು ಪತ್ರಿ ಬರೆದರು. ಮಸೂದೆ ಹಿಂದಕ್ಕೆ ಪಡೆಯಲು ವಿನಂತಿಸಿದರು. ಆದರೆ ಸರಕಾರ ಅವರ ಪತ್ರಕ್ಕೆ ಉತ್ತರಿಸುವ ಸೌಜನ್ಯವನ್ನು ತೋರಲಿಲ್ಲ. ಹೀಗಾಗಿ ಚಳುವಳಿ ಅನಿವಾರ್ಯವಾಯಿತು. ಚಳುವಳಇಯಲ್ಲಿ ಪಾಲ್ಗೊಳ್ಳಲಿದ್ದ ನಿಷ್ಠಾವಂತ ಕಾರ್ಯಕರ್ತ ಸ್ವೀಕರಿಸಬೇಕಿದ್ದ ಒಂದು ಪ್ರತಿಜ್ಞೆ ವಿಧಿಯನ್ನು ಕೆಳಗಿನಂತೆ ತಯಾರಿಸಲಾಯಿತು. "ನಾವು ಈ ಕಾನೂನು ಪಾಲಿಸಲು ನಿರಾಕರಿಸುತ್ತೇವೆ ಅಲ್ಲದೆ ಈ ಸಮಿತಿಯಿಂದ ರೂಪಗೊಳ್ಳುವ ಯಾವ ಕಾನೂನಿಗೂ ಅವಿಧೇಯತೆ ತೋರುತ್ತೇವೆ ಮತ್ತು ಹೋರಾಟದಲ್ಲಿ ವಿಶ್ವಾಸಪೂರ್ವಕವಾಗಿ ಭಾಗವಹಿಸುತ್ತೇವೆ ಹಾಗೂ ಯಾವುದೇ ವ್ಯಕ್ತಿಗಾಗಲಿ, ಆಸ್ತಿಗಾಗಲಿ ಹಾನಿಯಾಗದಂತೆ ನೋಡಿಕೊಳ್ಳುತ್ತೇವೆ ಎಂದು ಪ್ರತಿಜ್ಞೆಗೈಯುತ್ತೇವೆ".



ಹೋರಾಟ ಪ್ರಾರಂಭದ ಸೂಚಕವಾಗಿ ಗಾಂಧೀಜಿಯವರು ದೇಶವ್ಯಾಪಿ ಒಂದು ದಿನದ ಹರತಾಳಕ್ಕೆ ಕರೆ ನೀಡಿದರು. ಹರತಾಳದ ದಿನಾಂಕವನ್ನು ಮೊದಲು ಮಾರ್ಚ್ 30ಕ್ಕೆ ನಿಗದಿಪಡಿಸಲಾಗಿತ್ತು. ನಂತರ ಏಪ್ರಿಲ್ 6ಕ್ಕೆ ಮುಂದೂಡಲಾಯಿತು. ಹರತಾಳಕ್ಕೆ ಜನರ ಪ್ರತಿಕ್ರಿಯೆ ಉತ್ತಮವಾಗಿತ್ತು. ಹರತಾಳದ ದಿನವನ್ನು ಏಪ್ರಿಲ್ 6ಕ್ಕೆ ಆಚರಿಸಲು ನಿರ್ಧರಿಸಿದ್ದರೂ ಮಾರ್ಚ್ 30ರಂದೇ ದೇಶದ ಹಲವಾರು ಸ್ಥಳಗಳಲ್ಲಿ ಪ್ರತಿಭಟನೆಗಳು ನಡೆದವು. ಅನೇಕ ಸ್ಥಳಗಳಲ್ಲಿ ಜನರು ಮತ್ತು ಪೋಲೀಸರ ನಡುವೆ ಘರ್ಷಣೆಗಳು ಸಂಭವಿಸಿದವು. ದಿಲ್ಲಿಯಲ್ಲಿ ಪ್ರತಿಭಟನೆಕಾರರ ಮೇಲೆ ವಿವೇಚನೆ ಇಲ್ಲದೆ ಪೋಲೀಸರು ಗುಂಡು ಹಾರಿಸಿದಾಗ ಅನೇಕರು ಅಸುನೀಗಿದರು ಮತ್ತು ಅನೇಕರು ಗಾಯಗೊಂಡರು. ಬ್ರಿಟಿಷ್ ನರ್ಸ್‌ಗಳು ಗಾಯಾಳುಗಳ ಚಿಕಿತ್ಸೆ ಮಾಡಲು ನಿರಾಕರಿಸುವ ಮೂಲಕ ಅಮಾನವೀಯತೆ ತೋರಿದರು. ದೆಹಲಿ ಮತ್ತು ಪಂಜಾಬುಗಳಲ್ಲಿ ಪೋಲೀಸ್ ಲಾಠಿ ಚಾರ್ಜ್ ವ್ಯಾಪಕವಾಗಿತ್ತು. ಗಾಂಧೀಜಿಯವರು ಈ ಸ್ಥಳಗಳಿಗೆ ಭೇಟಿ ನೀಡಲು ಹೊರಟಾಗ ಅವರನ್ನು ಪೋಲೀಸರು ಮಾರ್ಗ ಮಧ್ಯದಲ್ಲಿ ತಡೆದು ಮುಂಬಯಿಗೆ ಮರಳುವಂತೆ ಮಾಡಿದರು. ಸುದ್ದಿ ತಿಳಿದ ಮುಂಬಯಿ ಜನತೆ ರೊಚ್ಚಿಗೆದ್ದು ಮೆರವಣಿಗೆ ನಡೆಸಿ ಗಾಂಧೀಜಿಯನ್ನು ಬರಮಾಡಿಕೊಂಡರು. ನಂತರ ಅಹಮ್ಮದಾಬಾದಿಗೆ ಭೇಟಿ ನೀಡಲು ಹೊರಟ ಗಾಂಧೀಜಿ ಹಾಗೂ ಸಂಗಡಿಗರನ್ನು ಸರಕಾರ ಬಂಧಿಸಿತು.

ಏಪ್ರಿಲ್ 6ರಂದು ಜನರ ಪ್ರತಿಭಟನೆಗಳು ಇನ್ನೂ ತೀವ್ರಗೊಂಡವು. ಜನರು ತೋರಿದ ಇಂಥ ಉದ್ರೇಕಕಾರಿ ಭಾವನೆಗಳು ಹಿಂದೆ ಬಂಗಾಲ ವಿಭಜನೆಯ ವಿರುದ್ಧ ಹೋರಾಟಗಳಲ್ಲೂ ವ್ಯಕ್ತವಾಗಿರಲಿಲ್ಲ.

**ಜಲಿಯನ್‌ವಾಲಾಬಾಗ್ ಹತ್ಯಾಕಾಂಡ :**

ಗಾಂಧೀಜಿಯ ಹರತಾಳದ ಕರೆಗೆ ಹೆಚ್ಚು ಸ್ಪಂದಿಸಿದ್ದು ಪಂಜಾಬು. ಗಾಂಧೀಜಿ ನಾಯಕತ್ವದಲ್ಲಿ ಪ್ರತಿಭಟನೆಯ ಹೊಸ ಅಲೆಯೇ ಅಲ್ಲಿ ಮೂಡಿಬಂತು. ಏಪ್ರಿಲ್ 6ರ ಹರತಾಳದ ನಂತರವೂ ಪ್ರತಿಭಟನೆಗಳು ಮುನ್ನಡೆದುವು. ಪಂಜಾಬು ಗೌರ್ನರ್ ಓ ಡಯರ್‌ನ ಆಡಳಿತ ಜನರಲ್ಲಿ ಆತಂಕ ಮೂಡಿಸಿತ್ತು. ಯುದ್ಧ ಸಾಲಗಳು ಜನರನ್ನು ಬಾಧಿಸಿದವು. ಅಲ್ಲದೆ ಗೌರ್ನರ್ ಡಯರ್ ಬಲಾತ್ಕಾರವಾಗಿ ಜನರನ್ನು ಸೇನೆಗೆ ಸೇರಿಸಿಕೊಳ್ಳುತ್ತಿದ್ದ ವಿಧಾನುಗಳು ಪಂಜಾಬಿನ ಜನತೆಯನ್ನು ಉದ್ರಿಕ್ತ ಗೊಳಿಸಿದುವು. ಚಳುವಳಿಯನ್ನು ದಮನ ಮಾಡಲು ದೃಢ ಸಂಕಲ್ಪ ಮಾಡಿದ್ದ ಗೌರ್ನರ ಇಬ್ಬರು ಪ್ರಮುಖ ನಾಯಕರಾದ ತಾ ಸಲ್ವಾಲ ಹಾಗೂ ತಾ ಸೈಪುದ್ದೀನ ಕಿಚ್ಲೀ ಅವರನ್ನು ಗಡಿಪಾರು ಮಾಡಲು ಆಜ್ಞಾಪಿಸಿದರು. ಈ ಕ್ರಮ ಜನರನ್ನು ರೊಚ್ಚಿಗೆಬ್ಬಿಸಿತು. ಪಂಜಾಬಿನಾದ್ಯಂತ ಹರತಾಳ, ಪ್ರತಿಭಟನೆಗಳು ನಡೆದವು. ಈ ಮಧ್ಯ ಗಾಂಧೀಜಿಯ ಬಂಧನದ ವಾರ್ತೆ ಪ್ರತಿಭಟನೆಕಾರರನ್ನು ಇನ್ನಷ್ಟು ಕುಪಿತರನ್ನಾಗಿ ಮಾಡಿತು. ಪ್ರತಿಭಟನೆಗಳು ಶಾಂತಿಯುತ ಆದರೆ ತೀವ್ರವಾಗಿದ್ದವು. ಅಂತಿಮವಾಗಿ ಸರಕಾರ ಅಮೃತಸರ್ ನಗರವನ್ನು ಸೇನ್ಯಾಡಳಿತಕ್ಕೆ ಒಪ್ಪಿಸಿತು. ಜನರಲ್ ಡಯರ್



ಅಧಿಕಾರ ವಹಿಸಿ ಕೊಂಡನು.

ಏಪ್ರಿಲ್ 13, 1919 ಅಮೃತಸರ ಜನತೆಯ ಮಟ್ಟಿಗೆ ಕರಾಳ ದಿನವಾಗಿ ಪರಿಣಮಿಸಿತು. ಭಾರತದ ಜನತೆ ಎಂದಿಗೂ ಮರೆಯಲಾಗದ ದಿನವಿದು. ನಾಯಕರ ಬಂಧನಗಳ ವಿರುದ್ಧ ತಮ್ಮ ಪ್ರತಿಭಟನೆ ವ್ಯಕ್ತಪಡಿಸಲು ಜನರು ಅಮೃತಸರದ ಜಾಲಿಯನ್‌ವಾಲಾಬಾಗ್‌ದಲ್ಲಿ ಸೇರಿದರು. ಇಂಥ ಸಭೆಗಳನ್ನೇ ಗುರಿಯಾಗಿಟ್ಟುಕೊಂಡು ಜನತೆಗೆ ತಕ್ಕ ಪಾಠ ಕಲಿಸಬೇಕೆಂದು ಡಾಯರ್ ನಿರ್ಧರಿಸಿದ್ದನು. ಜಲಿಯನ್‌ವಾಲಾಬಾಗ್ ಒಂದೆ ದ್ವಾರವಿರುವ ಚಿಕ್ಕ ಮೈದಾನ. ಅಂದು ಸುಮಾರು 6000 ಜನ ಅಲ್ಲಿ ಸೇರಿದ್ದರು. (ಸುಮಾರು 10,000 ಎಂದೂ ಹೇಳಲಾಗುತ್ತದೆ) ಸಭೆ ಸೇರುವವರು ಕಾನೂನು ಬಾಹಿರವೆಂದು ಸಾರುವುದಾಗಲಿ, ಜನತೆಯನ್ನು ಎದುರಿಸುವ ಕ್ರಮಗಳನ್ನಾಗಲಿ ಮಾಡದೆ ಜ. ಡಯರ್ ಇನ್ನೂ ಹೆಚ್ಚು ಜನ ಸೇರಲು ಅನುಕೂಲ ಮಾಡಿಕೊಟ್ಟನು. ಮೈದಾನ ಭರ್ತಿಯಾದ ಮೇಲೆ ಗುಂಡಿನ ಮಳೆಗೆರೆಯುವಂತೆ ಆಜ್ಞಾಪಿಸಿದನು. ಪ್ರವೇಶದ್ವಾರದಲ್ಲಿ ನಿಂತು ಸೈನಿಕರು ಗುಂಡುಹಾರಿಸಿದಾಗ ಜನರು ಪಾರಾಗಲು ಅನ್ಯ ಮಾರ್ಗವೆ ಇರಲಿಲ್ಲ. ಈ ಹತ್ಯಾಕಾಂಡದಲ್ಲಿ ಮಹಿಳೆಯರು, ಮಕ್ಕಳು ಗಂಡಸರೂ ಸೇರಿ 1000 ಜನರು ಸತ್ತರು. ಗಾಯಾಳುಗಳ ಸಂಖ್ಯೆ ಇದಕ್ಕೂ ಮಿಗಿಲಾಗಿತ್ತು. ಇದೊಂದು ಬರ್ಬರ ಕೃತ್ಯ. ಜಾಲಿಯನ್‌ವಾಲಾಬಾಗ್ ದುರಂತ ಜನರಲ್ ಡಯರ್‌ನ ನೀತಿಯಷ್ಟೆ ಆಗಿರಲಿಲ್ಲ, ಅವನಿಗೆ ಭಾರತ ಮತ್ತು ಬ್ರಿಟಿಷ್ ಸರಕಾರಗಳ ಪೂರ್ಣ ಬೆಂಬಲವಿತ್ತು. ಆನೇಕ ಇಂಗ್ಲೀಷ್ ನಾಗರಿಕರು ಜ. ಡಯರ್‌ನನ್ನು 'ರಕ್ಷಕ'ನೆಂದು ಬಣ್ಣಿಸಿದರು. ಮಾಂಟೆಗೋ ಈ ಕಗ್ಗೊಲೆಯನ್ನು 'ಪ್ರತಿಬಂಧಕ ಕೊಲೆ' ಎಂದು ಕರೆದನು. ಅದೇ ಸಮಯದಲ್ಲಿ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ನಂಬಿಕೆಯುಳ್ಳಂಥ ಕೆಲವು ಇಂಗ್ಲೀಷ್ ಜನವಿಭಾಗಗಳು ಈ ಅಮಾನವೀಯ ಕೃತ್ಯವನ್ನು ಖಂಡಿಸಿದವು. ಜಾಲಿಯನ್‌ವಾಲಾಬಾಗ್ ಹತ್ಯಾಕಾಂಡವೊಂದೇ ಅಲ್ಲ, ಅದಕ್ಕೆ ಪೂರ್ವದಲ್ಲಿ ಅಧಿಕಾರಗಳು ತೆಗೆದಕೊಂಡ ಅನೇಕ ಕ್ರಮಗಳು ಆಡಳಿತದ ಕ್ರೌರ್ಯಕ್ಕೆ ಸಾಕ್ಷಿಯಾಗಿ ನಿಂತಿವೆ. ಒಂದು ನಿಗಧಿತ ರಸ್ತೆಯಲ್ಲಿ ಜನರು ಹೋಗವಾಗ ತೆವಳಿಕೊಂಡೇ ಹೋಗುವಂತೆ ಮಾಡಲಾಗಿತ್ತು. ತಪ್ಪಿತಸ್ಥರು ಎಂದು ಭಾವಿಸಿದ ಜನರನ್ನು ಚರ್ಮ ಸುಲಿಯುವಂತೆ ಹೊಡೆಯುವುದು ಸಾಮಾನ್ಯವಾಗಿತ್ತು. ಇದರೊಂದಿಗೆ 51 ಜನರಿಗೆ ಮರಣ ದಂಡನೆ, 46 ಜನರಿಗೆ ಜೀವಾವಧಿ ಶಿಕ್ಷೆಗಳನ್ನು ಒಳಗೊಂಡಂತೆ 289 ಜನರಿಗೆ ಒದಗಿಸಲಾಗಿತ್ತು. ಈ ಕ್ರಮಗಳು ಜನರನ್ನು ಧೃತಿಗೆಡಿಸದೆ ಪ್ರತಿಕಾರದ ಭಾವನೆ ಹೊಂದುವಂತೆ ಮಾಡಿದ್ದವು. ಇದರ ಒಟ್ಟು ಪರಿಣಾಮವೇ ಜಲಿಯನ್ ವಾಲಾಬಾಗ್ ಸಭೆ ಮತ್ತು ದುರ್ಘಟನೆ.

ಸರಕಾರ ಜನತೆಯನ್ನು ಸಮಾಧಾನ ಪಡಿಸಲು ಈ ಹತ್ಯಾಕಾಂಡದ ವಿಚಾರಣೆಗೆ ಹಂಟರ್ ಕಮಿಷನ್ ನೇಮಿಸಿತು. ಹಂಟರ್ ಕಮಿಶನ್ ಮುಂದೆ ಡಯರ್ ನೀಡಿದ ಹೇಳಿಕೆ ಅವನು ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. "ಗುರಿಯನ್ನು ಬದಲಿಸಿ ಜನ ಹೆಚ್ಚಾಗಿದ್ದ ಕಡೆ ಹೊಡೆದರಾ?" ಎಂದು ಕೇಳಿದ್ದಕ್ಕೆ "ಹೌದು ಎಲ್ಲರನ್ನು ಕೊಲ್ಲಬೇಕೆಂದು ನಿರ್ಧರಿಸಿಬಿಟ್ಟಿದೆ" ಎಂದು ಉತ್ತರಿಸಿದನು.





ಆದರೂ ಹಂಟರ್ ಕಮಿಶನ್ ವರದಿ ಡೈಯರ್‌ನ ಪರವಾಗಿತ್ತು.

ಹಂಟರ್ ಸಮಿತಿಗೆ ಪರ್ಯಾಯವಾಗಿ ಕಾಂಗ್ರೆಸ್ ಸಮಿತಿಯೂ ಕೂಡ ಒಂದು ವಿಚಾರಣಾ ಆಯೋಗವನ್ನು ರಚಿಸಿತು. ಗಾಂಧೀಜೀ, ಮೋತಿಲಾಲ ನೆಹರು, ಸಿ.ಆರ್. ದಾಸ್, ಫಜುಹರ್ ಮತ್ತು ಅಬ್ಬಸ್ ತ್ಯಾಬಜಿ ಅವರನ್ನೊಳಗೊಂಡಂತೆ ಸಮಿತಿ ಸುಮಾರು ಒಂದು ಸಾವಿರ ಜನರ ಸಾಕ್ಷಿಗಳನ್ನು ಪಡೆಯಿತು. ಗೌ. ಮೈಕಲ್ ಓ ಡಯರ್‌ನ ಪ್ರಚೋದನಕಾರಿ ಕ್ರಮಗಳು, ಗಾಂಧಿ, ಡಾ. ಸತ್ಪಾಲ ಹಾಗೂ ಡಾ. ಕಿಚ್ಲೀ ಅವರ ಬಂಧನ ಜನತೆಯ ಕ್ರೋಧಕ್ಕೆ ಕಾರಣವಾಗಿದ್ದವು. ಸೈನಿಕ ಆಡಳಿತ ಜನರ ಕ್ರೋಧಕ್ಕೆ ಪುಷ್ಟಿ ನೀಡಿತು. ಜನರು ಸೇಡಿನ ಮನೋಭಾವ ತಾಳಲು ಇವು ಕಾರಣವಾದವು.

ಜಾಲಿಯನ್ ವಾಲಾಬಾಗ್ ಹತ್ಯಾಕಾಂಡದಂತ ಪಾಶವೀಯ ಕೃತಿ ಬ್ರಿಟಿಷ್ ಆಡಳಿತದ ಇತಿಹಾಸದಲ್ಲೇ ಇನ್ನೊಂದಿರಲಾರದು ಎಂದು ಈ ವಿಚಾರಣಾ ಸಮಿತಿ ತನ್ನ ವರದಿಯಲ್ಲಿ ತಿಳಿಸಿತು.

ಗಾಂಧೀಜಿಯವರು ಜಲಿಯನ್‌ವಾಲಾಬಾಗ್ ಹತ್ಯಾಕಾಂಡವನ್ನು ತಮ್ಮ ಹೋರಾಟಕ್ಕೆ ಮುಖ್ಯ ವಿಷಯವಾಗಿ ತೆಗೆದುಕೊಂಡರು ಮತ್ತು ಅಖಿಲ ಭಾರತ ರಾಷ್ಟ್ರೀಯ ಚಳುವಳಿಯ ಮುಂಚೂಣಿಯಲ್ಲಿ ತಮ್ಮನ್ನು ಗುರುತಿಸಿಕೊಂಡರು. ಜನರ ಆಕ್ರೋಶ, ಅಸಮಧಾನ, ಪ್ರತಿಭಟನೆಗಳಿಗೆ ಧ್ವನಿ ನೀಡಿದರು. ಅವರು ಅನುಸರಿಸಿದ ಕಾರ್ಯ ವಿಧಾನ ಇತರ ನಾಯಕರಿಗಿಂತ ಭಿನ್ನವಾಗಿತ್ತು. ದೇಶಾದ್ಯಂತ ಎಲ್ಲಾ ಜನವಿಭಾಗಗಳನ್ನು ದೊಡ್ಡ ಪ್ರಮಾಣದಲ್ಲಿ ಸಂಘಟಿಸಿ ಅಣಿನೆರೆಯಿಸಿದರು.

ಗಾಂಧೀಜಿ ಜಲಿಯನ್‌ವಾಲಾಬಾಗ್ ಹತ್ಯಾಕಾಂಡದ ಮಾರನೇ ದಿನ ಅಂದರೆ ಏಪ್ರಿಲ್ 14ರಂದು ಅಹಮ್ಮದಬಾದಿನಲ್ಲಿ ಮಾತನಾಡುತ್ತಾ ಜನರು ಹಿಂಸೆಗಳಿದದ್ದನ್ನು ತೀವ್ರವಾಗಿ ಖಂಡಿಸಿದರು. ತಪ್ಪೊಪ್ಪಿಕೊಳ್ಳುತ್ತಾ ಇದು ಹಿಮಾಲಯದಷ್ಟೆ ದೊಡ್ಡ ಪ್ರಮಾಣದ ಪ್ರಮಾದ ಎಂದೂ, ಜನರು ಇಷ್ಟು ಬೇಜಾವಾಬುದಾರಿಯಿಂದ ವರ್ತಿಸುತ್ತಾರೆಂದು ನಾನು ಭಾವಿಸಿರಲಿಲ್ಲ ಎಂದು ತಿಳಿಸಿದರು. ಗಾಂಧೀಜಿ ತಮ್ಮ ಹೋರಾಟದ ಗುಣವನ್ನು ಬಹಿರಂಗ ಪಡಿಸಿದರು. ರಾಷ್ಟ್ರೀಯ ಚಳುವಳಿಯಲ್ಲಿ ಲಕ್ಷಾಂತರ ಹಳ್ಳಿಗಳು ಪಾಲ್ಗೊಳ್ಳುವಂತೆ ಮಾಡಿದ ಕೀರ್ತಿ ಗಾಂಧೀಜಿಗೆ ಸಲ್ಲುತ್ತದೆ. ಆದರೆ ಅದೇ ಹಳ್ಳಿಗರ, ರೈತರ ಒಂದು ಸಂಘಟಿತ ಶಕ್ತಿಯಾಗುವ ಬಗ್ಗೆ ಅವರ ಕಾಳಜಿ ಇರಲಿಲ್ಲ ಮತ್ತು ಆ ಬಗ್ಗೆ ಅವರ ಪ್ರಯತ್ನ ಕೂಡ ಇರಲಿಲ್ಲ. ಆದರೆ ಅದೇ ಲಕ್ಷಾಂತರ ಹಳ್ಳಿಗರು ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಮಾಡಿ, ಶ್ರೀಮಂತ ಹಾಗೂ ಮಧ್ಯಮ ವರ್ಗದ ನಾಯಕತ್ವದಲ್ಲಿ ಚಳುವಳಿ ಮುಂದುವರೆಯುವಂತೆ ಕಾಳಜಿ ವಹಿಸಿದ್ದು ಗಮನಾರ್ಹ ಸಂಗತಿ. ಹಾಗೆಂದ ಮಾತ್ರಕ್ಕೆ ಗಾಂಧೀಜಿ ಕೇವಲ ಶ್ರೀಮಂತ ವರ್ಗದ ಪಕ್ಷಪಾತಿ ಎಂದು ಸರಳೀಕರಿಸಿಬಿಡುವುದು ತಪ್ಪಾಗುತ್ತದೆ. ಇನ್ನೊಂದು ಸಂಗತಿಯೆಂದರೆ ಗಾಂಧೀಜಿ ಕೆಲವು ಆದರ್ಶಗಳಿಗೆ ಕಟ್ಟುಬಿದ್ದುದರಿಂದ ಅವರು ತೆಗೆದುಕೊಳ್ಳುತ್ತಿದ್ದ ನಿರ್ಧಾರಗಳು ಎಷ್ಟೋ ಸಲ ಏಕಪಕ್ಷೀಯವಾಗಿರುತ್ತಿದ್ದವು. ಚೌರಿ-ಚೌರಾ ಘಟನೆ



ನಂತರ ಹೋರಾಟವನ್ನು ಸ್ಥಗಿತಗೊಳಿಸಿದ್ದನ್ನು ಉದಾಹರಣೆಯಾಗಿ ನೀಡಬಹುದು. ಇಂಥ ಕ್ರಮಗಳ ಬಗ್ಗೆ ಸಾರ್ವಜನಿಕ ಟೀಕೆಗಳು ಬಂದಾಗಲೂ ಅವರು ವಿಚಲಿತರಾಗುತ್ತಿರಲಿಲ್ಲ. ಗಾಂಧೀಜಿಯ ಹೋರಾಟದಲ್ಲಿ ಮಾರ್ಗ ಮುಖ್ಯವಾಗಿತ್ತು. ಗುರಿಯಲ್ಲಿ ಅವರು ಅನುಸರಿಸಿದ ಮಾರ್ಗ ಅಹಿಂಸಾ ಮಾರ್ಗ. ಜನಸಮುದಾಯವನ್ನು ದೊಡ್ಡ ಪ್ರಮಾಣದಲ್ಲಿ ಸಂಘಟಿಸಿ ಹೋರಾಟಕ್ಕೆ ಅಣಿನೆರೆಸುವಲ್ಲಿ ಗಾಂಧೀಜಿ ತೋರಿದ ಸಾಮರ್ಥ್ಯ ಅಗಾಧವಾದದು. ಆ ಸಮಯದಲ್ಲಿ ಮತ್ತಾವ ನಾಯಕರಿಗೂ ಇದು ಸಾಧ್ಯವಾಗಿರಲಿಲ್ಲ. ಆದರೆ ಹೋರಾಟ ಪರಾಕಾಷ್ಟೆ ತಲುಪಿದ ಒಂದು ಹಂತದಲ್ಲಿ ಸ್ವಲ್ಪ ಹಿಂಸೆ ಉಂಟಾದರೂ ಹೋರಾಟವನ್ನು ಯಾವ ಮುಲಾಜಿಲ್ಲದೆ ಹಿಂತೆಗೆಯುತ್ತಿದ್ದರು. ಜನಸಮುದಾಯದ ಮಧ್ಯದಲ್ಲಿ ಒಂದು ಗಟ್ಟಿ ಸಂಘಟನೆ ಬೆಳೆದುಬಾರದಿರುವುದಕ್ಕೆ ಇಂಥ ಹೋರಾಟ ಕ್ರಮಗಳೇ ಕಾರಣ.

ಗಾಂಧೀಜಿ ಭಾರತದ ಸ್ವಾತಂತ್ರ್ಯದಷ್ಟೆ ಪ್ರಧಾನ್ಯತೆ ನೀಡಿದ್ದ ಇತರ ವಿಷಯಗಳೆದರೆ ಹಿಂದೂ-ಮುಸ್ಲಿಂ ಐಕ್ಯತೆ, ಅಸ್ಪ್ರಶ್ಯತಾ ನಿವಾರಣೆ ಹಾಗೂ ಸ್ತ್ರೀಯರ ಸ್ಥಾನಮಾನ ಎತ್ತರಿಸುವುದು. ಅವರು ತಮ್ಮ ಭಾರತದ ಕನಸಿನ ಬಗ್ಗೆ ಹೀಗೆ ಬರೆದರು "ಅತ್ಯಂತ ದರಿದ್ರರಾದವರೂ ಇದು ತಮ್ಮದು ಎಂದು ಭಾವಿಸಿಕೊಳ್ಳುವ ಭಾರತಕ್ಕಾಗಿ ನಾನು ದುಡಿಯಲು ಇಚ್ಛಿಸುತ್ತೇನೆ. ಆ ಭಾರತದಲ್ಲಿ ಜನರ ಮೇಲು ಕೀಳು ವರ್ಗಗಳಿರುವುದಿಲ್ಲ. ಅಲ್ಲಿ ಜನಾಂಗಗಳು ಸಂಪೂರ್ಣ ಸಾಮರಸ್ಯದಿಂದ ಜೀವಿಸುತ್ತಾರೆ. ಅಂತಹ ಭಾರತದದಲ್ಲಿ ಅಸ್ಪೃಶ್ಯತೆಯ ಶಾಪಕ್ಕೆ ಎಡೆಯೇ ಇಲ್ಲ. ಸ್ತ್ರೀಯರೂ ಪುರುಷರಷ್ಟೆ ಸಮಾನವಾದ ಸ್ಥಾನಮಾನಗಳನ್ನು ಪಡೆದಿರುತ್ತಾರೆ. ಇದೆ ನನ್ನ ಕನಸಿನ ಭಾರತ".

ಬ್ರಿಟಿಷರು ಒಡೆದು ಆಳುವ ನೀತಿಯ ಫಲವಾಗಿ ಹಿಂದೂ ಮುಸ್ಲಿಂರ ಮಧ್ಯ ಕಾಣಿಸಿಕೊಂಡ ಬಿರುಕು ರಾಷ್ಟ್ರೀಯ ಚಳುವಳಿಗೆ ಖಂಡಿತಾ ಪೆಟ್ಟು ಬೀಳುತ್ತದೆ ಎಂದು ಮನಗಂಡಿದ್ದ ಗಾಂಧೀಜಿ ಖಿಲಾಫತ್ ಚಳುವಳಿಗೆ ಬೆಂಬಲ ನೀಡಿದರು. ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಜನತೆಗೂ ಕರೆ ನೀಡಿದರು. ಮುಂದೆ ಅಸಹಕಾರ ಆಂದೋಲನದ ಮೂಲಕ ರಾಷ್ಟ್ರೀಯ ಚಳುವಳಿ ಮುಂದುವರೆಯಿತು.



